# ಕುರುಡು ಚಕ್ರ

ಸೇವ ನಮಿರಾಜಮಲ್ಲ




(ತಾಜ್‌ಮಹಲ್ ಹೋಟೆಲ್ ಬಿಲ್ಡಿಂಗ್ಸ್)

ಗಾಂಧಿನಗರ : : ಬೆಂಗಳೂರು ೯



ಸೇವ ನಸಿಂರಾಜಮಲ್ಲ ಮಂಗಳೂರಿನ ಬಳಿಯ ಪಳ್ಳಿಯೊಂದರಲ್ಲಿ ಮೂವತ್ತು ವರ್ಷಗಳ ಹಿಂದೆ ಜನಿಸಿದರು. ಪುತ್ತೂರು, ಮಂಗಳೂರು ಮತ್ತು ಮದ್ರಾಸುಗಳಲ್ಲಿ ಅವರ ವಿದ್ಯಾಭ್ಯಾಸ ನಡೆದು, ಮದ್ರಾಸು ವಿಶ್ವವಿದ್ಯಾಲಯದ ಎಂ. ಎ. ಮತ್ತು ಬಿ. ಎಲ್. ಪದವಿಗಳನ್ನು ಪಡೆದಿದ್ದಾರೆ.

ಹತ್ತು ವರ್ಷಗಳಿಂದ ಅವರ ಬರಹಗಳು ಕನ್ನಡ ಪತ್ರಿಕೆಗಳಲ್ಲಿ ಪ್ರಕಟವಾಗುತ್ತಿವೆ. ಅಲ್ಲದೆ ಅವರ ಒಂದು ಕಥಾ ಸಂಕಲನವೂ ಐದು ಕಾದಂಬರಿಗಳೂ ಈ ತನಕ ಬೆಳಕಿಗೆ ಬಂದಿವೆ.

ಮಲ್ಲರು ಪತ್ರಿಕೋದ್ಯಮ ಅನುಭವವನ್ನು ಸ್ವಲ್ಪ ಗಳಿಸಿದ್ದಾರೆ. ಸುಮಾರು ಎರಡು ವರ್ಷಕಾಲ ಮದ್ರಾಸಿನ "ಲಿಬರೇಟರ್" ಮತ್ತು ಬೊಂಬಾಯಿಯ "ಟೈಮ್ಸ್ ಆಫ್ ಇಂಡಿಯಾ" ಇಂಗ್ಲೀಷು ದೈನಿಕಗಳ ಸಂಪಾದಕ ಮಂಡಲಿಯಲ್ಲಿದ್ದರು. ಸ್ವಲ್ಪ ಸಮಯ ಮದ್ರಾಸು ಸರ್ಕಾರದ ಸಮಾಚಾರ ಇಲಾಖೆಯಲ್ಲಿ ಪ್ರಚಾರ ಸಹಾಯಕರಾಗಿಯೂ ದುಡಿದಿದ್ದಾರೆ. ಸದ್ಯ ಅವರು ಮಂಗಳೂರಲ್ಲಿ ವಕೀಲ ವೃತ್ತಿಗೆ ಕಾಲಿಟ್ಟಿದ್ದಾರೆ.

ಪ್ರಥಮ ಮುದ್ರಣ:
ಸೆಪ್ಟೆಂಬರ್ ೧೯೫೪





**ಹತ್ತು ಆಣೆ**

ಮುಖ ಚಿತ್ರ
ವೀನಸ್ ಆರ್ಟ್ಸ್

ರಕ್ಷಾಪತ್ರ:
ರಾಮಕೃಷ್ಣ ಪ್ರೆಸ್

ಮುದ್ರಣ:
ಶ್ರೀ ಲಲಿತ ಪ್ರಿಂಟಿಂಗ್ ವರ್ಕ್ಸ್
ಅಕ್ಕೀಪೇಟೆ, ಬೆಂಗಳೂರು ೨

೧

ಮಳೆ ನಿಂತು ಅರ್ಧ ಗಂಟೆ ಕಳೆದಿದ್ದರೂ ನಾರಾಯಣ ಬಿಡಿಸಿದ ಕೊಡೆಯನ್ನು ಮಡಚಿರಲಿಲ್ಲ. ಮುನ್ಸಿಪಾಲಿಟಿಯ ಕೊನೆಯ ದೀಪದ ಕಂಭವನ್ನು ದಾಟಿ ಮತ್ತೂ ಅವನಿಗೆ ಒಂದು ಮೈಲು ದೂರ ಹೋಗ ಬೇಕು, ಅದೂ ಕಾಲುದಾರಿಯಲ್ಲಿ. ಒಂದು ಬದಿಯಲ್ಲಿ ಮುಳ್ಳಿನ ಬೇಲಿ. ಮತ್ತೊಂದು ಬದಿಯಲ್ಲಿ ಗದ್ದೆ. ಒಂದಿಷ್ಟು ಕಾಲನ್ನು ಆಚೆಗೆ ಇಟ್ಟರೆ ದಾರಿಯ ಅಂಚಿನ ಮಣ್ಣು ಕುಸಿಯುವುದು. ಅವನ ಇಡೀ ಮೈ ಆಗ ತೂಕ ತಪ್ಪಿ ಅತ್ತಿತ್ತ ವಾಲುವುದು. ಆಗ ಕೈ ಸ್ವಲ್ಪ ಅಲ್ಲಾಡಿ ದರೆ ಕೊಡೆಯ ವಸ್ತ್ರ ಬಿದಿರಿನ ಮುಳ್ಳು ಬೇಲಿಗೆ ಸಿಗುವುದು. ಬಾಯಿ ಯಲ್ಲೇನೋ ಬೀಡಿಯ ತುಣುಕು ಬೆಳಕು ಇತ್ತು. ಆದರೆ ದಾರಿ ನಡೆ ಯಲು ಬೇಕಾಗುವಷ್ಟು ಅವನಿಗೆ ಅದು ಬೆಳಕನ್ನೀಯದು. ಬೆಂಕಿ ಕಡ್ಡಿಯನ್ನು ಗೀರುವಷ್ಟು ಸಹನೆ ಅವನಿಗಿಲ್ಲ. ಅವನು ನಡೆಯುತ್ತಿದ್ದ ಸಪ್ಪಳಕ್ಕೆ ಬದಿಯಲ್ಲಿದ್ದ ಕಪ್ಪೆಗಳು ಅವನ ಕಾಲ ಮೇಲೆಯೂ ಒಮ್ಮೊಮ್ಮೆ ಗಾಬರಿಯಲ್ಲಿ ಹಾರುತ್ತಿದ್ದುವು. ಒಂದು ಕಡೆ ಒಂದು ಹಾವು ಅವನ ಕಾಲಿನ ಮೇಲಿನಿಂದಲೇ ಸರಿಯಿತು. ಆದರೂ ಅವನಿಗೆ ಹೆದರಿಕೆಯಾಗಲಿಲ್ಲ. ಸ್ವಲ್ಪ ಮುಂದೆ ಹೋಗುವಾಗ ಅವನ ಮನೆಯ ಕಿಟಕಿಯಿಂದ ಬೆಳಕು ಕಂಡಿತು. ಇನ್ನೇನು, ಇದರಿಂದ ಪಾರಾದೆನೆಂದು ವಿಮೋಚನೆಯ ಉತ್ಸಾಹವನ್ನು ತಾಳಿ ಅವನು ಮುಂದೆ ಇಟ್ಟ ಹೆಜ್ಜೆ ದಾರಿಯ ಅಂಚಿಗಾಯಿತು. ಆಗ ಕಾಲಿನಲ್ಲಿದ್ದ ರಬ್ಬರಿನ ಬೂಟ್ಸು ಫಕ್ಕನೆ ಸಡಿಲಿ ಜಾರಿತು. ಅವನು ಪುನಃ ನೆಟ್ಟಗೆ ನಿಲ್ಲಲು ಯತ್ನಿಸುತ್ತಿದ್ದಂತೆಯೇ ಎರಡು ಆಳು ಕೆಳಗಿದ್ದ ಗದ್ದೆಗೆ ಬಿದ್ದುಬಿಟ್ಟ. ಮೈಯೆಲ್ಲ ಕೆಸರಿನಲ್ಲಿ ಒದ್ದೆಯಾಯಿತು. ಕಣ್ಣು, ಮೂಗುಗಳೊಳಗೂ ಕೆಸರಿನ ನೀರು

ಹೊಕ್ಕಿತು. ಅವನಿಗೆ ಅಲ್ಲಿಂದ ಏಳಲೂ ಕೂಡಾ ಬಹಳ ಕಷ್ಟವಾಯಿತು. ಸೊಂಟವು ಕೆಸರು ಮಣ್ಣಿನಲ್ಲಿ ಹೂತುಹೋದಂತಾಗಿತ್ತು. ಕಾಲನ್ನು ನೆಲಕ್ಕೆ ಊರಿ ಏಳುವಾಗ ಕಾಲು ಜಾರುವುದು. ಕೈಯನ್ನು ಊರಿ ಏಳು ವಾಗ ಕಾಲು ಜಾರುವುದು. ಹೇಗೋ ಅವನು ಹೊರಳಾಡಿ ಹೊರಳಾಡಿ ಮತ್ತೆ ಎದ್ದುನಿಂತು ಕಿಸೆಗೆ ಕೈ ಹಾಕಿದ. ಬೆಂಕಿಕಡ್ಡಿಯ ಪೊಟ್ಟಣ ಎಲ್ಲೋ ಬಿದ್ದುಹೋಗಿತ್ತು. ಹಣದ ಚೀಲ ಸಂಪೂರ್ಣವಾಗಿ ಒದ್ದೆ ಯಾಗಿತ್ತು. ಬೀಡಿಯ ಕಟ್ಟನೊಡನೆ ಕೆಸರುಮಣ್ಣು ಬೆರೆತಿತ್ತು. ಮತ್ತೆ ಮೆಲ್ಲನೆ ಕೆಸರಿನಲ್ಲಿ ಅಂದಾಜಿಗೆ ಕಾಲು ಹಾಕುತ್ತ ಕಟ್ಟಹುಣಿಯ ಬದಿಗೆ ಬಂದು ಅದನ್ನೇರಲು ಯತ್ನಿಸಿದ. ಆದರೆ ಮೇಲಿನಿಂದ ಅವನಿಗೆ ಹಿಡಿಯಲಿಕ್ಕೆ ಏನೂ ಸಿಗಲಿಲ್ಲ. ಹಸಿ ಮಣ್ಣಿಗೆ ಕೈ ಹಾಕಿದರೆ ಅದು ಕೈಯಲ್ಲೇ ಬರುತ್ತಿತ್ತು. ಕೊನೆಗೆ ಗದ್ದೆಯಿಂದ ಮೇಲೇರಿ ಹೋಗುವ ಮೆಟ್ಟಲನ್ನು ಕತ್ತಲೆಯಲ್ಲೇ ಹುಡುಕಾಡತೊಡಗಿದ. ಅದನ್ನು ಹುಡು ಕುವ ಆತುರದಲ್ಲಿ ಪುನಃ ನಾಲ್ಕೈದು ಬಾರಿ ಕೆಸರಿನಲ್ಲಿ ಎಡವಿ ಬಿದ್ದ. ಆಗ ತನ್ನ ಬಿಲ್ಲೆಯಿದೆಯೋ ಎಂದು ಕಿಸೆಗೆ ಕೈ ಹಾಕಿ ನೋಡಿದ. ಅದು ಎಲ್ಲೋ ಬಿದ್ದುಹೋಗಿತ್ತು. ಅವನ ಕಳವಳ ಆಗ ಇಮ್ಮಡಿಯಾಯಿತು. ಲೈಸನ್ಸ್ ಪುಸ್ತಕವನ್ನು ಮುಟ್ಟಿನೋಡಿದ. ಅದು ಇನ್ನೂ ಜೇಬಿನಲ್ಲೇ ಇತ್ತಾದರೂ ಸಂಪೂರ್ಣ ಒದ್ದೆಯಾಗಿತ್ತು. ಗದ್ದೆಯಲ್ಲಿ ಒಂದಿಷ್ಟು ಬೆಳಕೂ ಕಾಣುತ್ತಿದ್ದಿಲ್ಲ. ಎಲ್ಲೋ ಅಲ್ಲೊಮ್ಮೆ ಇಲ್ಲೊಮ್ಮೆ ಕರಿಮೋಡದ ಅಂಚಿನಲ್ಲಿದ್ದ ಬಿಳಿಯ ರೇಖೆ ನೀರಿನ ಮೇಲೆ ಪ್ರತಿಬಿಂಬಿಸುತ್ತಿದ್ದುದು ಕಾಣುತ್ತಿತ್ತು. ಮನೆಯವರನ್ನು ಕರೆಯೋಣವೆಂದರೆ ಅವನಿಗೆ ನಾಲಿ ಗೆಯೇ ಬಾರದು. ಆಗ ಅವನಿಗೆ ಬೀಳುವಾಗ ಕೈಯಲ್ಲಿದ್ದ ಕೊಡೆಯು ನೆನಪಾಯಿತು. ಅದೂ ಗದ್ದೆಯಲ್ಲಿದೆಯೆ, ಅಥವಾ ಮೇಲೆ ಉಳಿದಿದೆಯೋ ಎಂದು ಬಹಳ ಯೋಚಿಸಿದ. ಕೊನೆಗೆ ತಾನು ಕೆಳಗೆ ಜಾರಿ ಬೀಳುವಾಗ ಅದು ಮೇಲೆ ಮುಳ್ಳಿನಲ್ಲಿ ಸಿಕ್ಕಿಕೊಂಡು ಅಲ್ಲೇ ಉಳಿದಿರಬಹುದೆಂದು ಅವನಿಗೆ ಹೊಳೆಯಿತು. ಆದರೆ ಅವನಿಗೆ ಮೊದಲೇ ಆಯಾಸವಾಗಿತ್ತು. ಆದ್ದರಿಂದ ಮೊಣಕಾಲವರೆಗೆ ಮುಳುಗುವ ಆ ಕೆಸರಿನಲ್ಲಿ ಹೆಜ್ಜೆ ತೆಗೆಯು ವುದೆಂದರೆ ಸುಲಭದ ಕೆಲಸವಾಗಿರಲಿಲ್ಲ ಅವನಿಗೆ. ಆದರೆ ಆಯಾಸ

ಪರಿಹಾರಕ್ಕೆಂದು ಅಲ್ಲಿ ಕುಳಿತುಕೊಳ್ಳಲೂ ಉಪಾಯವಿಲ್ಲ. ನಾಲ್ಕು ಸುತ್ತಲೂ ಕೆಸರು. ನಿಂತುಕೊಂಡರೆ ಕಾಲು ನೋಯುತ್ತಿತ್ತು. ಆದರೂ ಅವನು ಬುಸುಗುಟ್ಟುತ್ತ ಮೆಲ್ಲ ಮೆಲ್ಲನೆ ಹೆಜ್ಜೆ ಹಾಕಲು ಯತ್ನಿಸುತ್ತಿದ್ದ.

ಸ್ವಲ್ಪ ಸಮಯವಾಗುವಾಗ ಯಾರೋ ಲಾಟೀನುಗಳನ್ನು ಹಿಡಿದು ಕೊಂಡು ಹೋಗುತ್ತಿರುವುದು ಕಂಡಿತು. ಆದರೆ ಅವರನ್ನು ಕರೆಯಲು ಅವನಿಗೆ ನಾಲಿಗೆ ಬಾರದು. ಲಾಟೀನಿನ ತುಣುಕು ಬೆಳಕಿನಲ್ಲಿ ಅವರು ಯಾರೆಂಬುದು ಅವನಿಗೆ ತಿಳಿಯದು. ಮತ್ತೆ ಅವರ ಬೆಳಕಾದರೂ ಅವನ ಮೇಲೆ ಬೀಳದು. ಅವನು ಆಗ ನಡೆಯುತ್ತಾ ಇರುತ್ತಿದ್ದರೆ ಅವರು ಚಳಪಳ ಸದ್ದನ್ನಾದರೂ ಕೇಳಿ ಅವನನ್ನು ಕಂಡುಹಿಡಿಯಬಹು ದಿತ್ತು. ಆದರೆ ಅವನು ನಿಂತಲ್ಲಿಂದ ಕದಲಲಿಲ್ಲ. ಅವನಿಗೆ ಅವರ ಗುರುತು ಸಿಗದೆ ಏನನ್ನೂ ಮಾಡಲು ಸಾಧ್ಯವಿದ್ದಿಲ್ಲ. ಅವರೇನೋ ಗಟ್ಟಿಯಾಗಿ ಮಾತಾಡುತ್ತಿದ್ದರು, ನಗುತ್ತಿದ್ದರು.

ಮತ್ತೆ ಸ್ವಲ್ಪಸಮಯದಲ್ಲಿ ಯಾರೋ ಒಬ್ಬರು ಟಾರ್ಚ್ ಲೈಟನ್ನು ಕೈಯಲ್ಲಿ ಹಿಡಿದುಕೊಂಡು ಬರುತ್ತಿರುವುದು ಅವನಿಗೆ ಕಂಡಿತು. ಆ ವ್ಯಕ್ತಿಯನ್ನು ಅವನಿಗೆ ಕರೆಯುವ ಮನಸ್ಸಿರಲಿಲ್ಲ. ಆದರೆ ಆಗ ಅವನಿಗೆ ಹಠಾತ್ತನೆ ಒಂದು ಕೆಮ್ಮು ಬಂತು. ಕೂಡಲೇ ಟಾರ್ಚಿನ ಬೆಳಕು ಅವನ ಮೇಲೆ ಬಿತ್ತು. ಅವನಿಗೆ ತುಂಬಾ ಕಳವಳವಾಯಿತು. ಅಲ್ಲಿಂದ ಒಮ್ಮೆಲೇ ಓಡಿಬಿಡೋಣವೆಂದೆನ್ನಿಸಿತು ಅವನಿಗೆ. ಕಾಲಿನ ಗಂಟುಗಳಲ್ಲಿ ಮಾತ್ರ ಶಕ್ತಿಯಿರಲಿಲ್ಲ. ಸೊಂಟದ ಕೀಲು ನೋಯುತ್ತಿತ್ತು. ಆದರೂ ಅವನು ತನ್ನ ಮುಖ ಮುಚ್ಚಿಕೊಂಡ.

ಬಹುಶಃ ಆ ಲೈಟು ಹಾಕಿದ ವ್ಯಕ್ತಿಗೂ ಅವನ ಗುರುತು ಸಿಕ್ಕಿರ ಲಿಕ್ಕಿಲ್ಲ. ಬಹುಶಃ ಅದಕ್ಕೆ ಅಲ್ಲಿ ಒಬ್ಬ ಮನುಷ್ಯನಿದ್ದಾನೆಂದೂ ತಿಳಿದಿರಲಿ ಕ್ಕಿಲ್ಲ. ರಾತ್ರೆ ಗದ್ದೆಯಲ್ಲಿ ದನಕರುಗಳೋ ಆಡುಗಳೋ ತಪ್ಪಿಸಿಕೊಂಡು ಇರುವುದು ಸ್ವಾಭಾವಿಕವಾಗಿತ್ತು. ಕೆಲವೊಮ್ಮೆ ನಾಯಿಗಳೂ ಮೀನುಗ ಳನ್ನು ಹಿಡಿದು ತಿನ್ನಲಿಕ್ಕೆ ತಿರುಗಾಡುವುದೂ ಇತ್ತು. ಮತ್ತೆ ಮಳೆಗಾ ಲದಲ್ಲಿ ಬೆಕ್ಕುಗಳಿಗಂತೂ ಗದ್ದೆಗಳಲ್ಲೇ ಕಪ್ಪೆಗಳನ್ನೋ ಮೀನುಗಳನ್ನೋ ಹೊಂಚುಹಾಕಿ ಹಿಡಿದು ತಿನ್ನುವುದೊಂದೇ ಕೆಲಸ. ಆದುದರಿಂದ ಆ

ವ್ಯಕ್ತಿ ತನ್ನಷ್ಟಕ್ಕೆ ಮುಂದರಿಯಿತು. ಆದರೆ ನಾರಾಯಣನಿಗೆ ಅವರ ನಡಿಗೆ ಅಸ್ಪಷ್ಟವಾಗಿ ಅಲ್ಲಿಗೆ ಲೈಟಿನ ಬೆಳಕಿನಲ್ಲಿ ತೋರುತ್ತಿತ್ತು. ದಿಂಡಾದ ಎತ್ತರ ನಿಲುವಿಕೆಯ ಆಳು ಅದು. ತಲೆಯಲ್ಲಿ ಒಂದು ಮುಂಡಾಸು ಇತ್ತು. ಸೊಂಟಕ್ಕೆ ಬಣ್ಣದ ಲುಂಗಿಯನ್ನು ಸುತ್ತಿಕೊಂಡಿತ್ತು. ಕಾಲಿನಲ್ಲಿದ್ದ ದಪ್ಪ ಚರ್ಮದ ಎಕ್ಕಡದ ಶಬ್ದ ಅವನಿಗೆ ಕಪ್ಪೆಗಳ ಮತ್ತು ಕ್ರಿಮಿಕೀಟಗಳ ಕೂಗಿನ ಮಧ್ಯದಲ್ಲೂ ಕೇಳುತ್ತಿತ್ತು.

ಕೊನೆಗೆ ಅದು ಮಾಮುಬ್ಯಾರಿಯೆಂದು ನಾರಾಯಣನಿಗೆ ತಿಳಿಯಿತು. ಮೊದಲೇ ಗೊತ್ತಾಗುತ್ತಿದ್ದರೆ ಅವನನ್ನು ಕರೆದುಬಿಡಬಹುದಿತ್ತೆಂದು ಅವನಿಗೆ ತೋರಿತು.

ಆಕಾಶ ಇನ್ನೂ ಕಪ್ಪಾಗುತ್ತಿತ್ತು. ಮೋಡಗಳ ಮೇಲೆ ಮೋಡಗಳು ಸರಿದು ನಿಲ್ಲುತ್ತಿದ್ದವು. ವೇಗವಾಗಿ ಬೀಸುವ ಗಾಳಿಯೊಡನೆ ನೀರ ಹನಿಗಳು ಹಾರಾಡುತ್ತಿದ್ದವು. ಒಂದೆಡೆಯಿಂದ ಸಮುದ್ರದ ಘೋರ ಗರ್ಜನೆ ಕೇಳುವುದು. ಮತ್ತೊಂದೆಡೆಯಿಂದ ಅಲ್ಲೇ ಗದ್ದೆಯಿಂದ ಕೆಳಗೆ ತೋಡಿನಲ್ಲಿ ನೀರು ಹರಿಯುತ್ತಿರುವ ಸದ್ದು ಕೇಳುವುದು. ಕಪ್ಪೆಗಳು ಒಂದೇಸವನೆ ರಟ ರಟೆನ್ನುತ್ತ ಕೂಗುತ್ತಿವೆ. ಒಂದು 'ಟೊರೋ ಟೊರೋ' ಎನ್ನುವಾಗ ಇನ್ನೆರಡು ಟ್ರುಂಟ್ರುಂ ಎನ್ನುವುವು. ಇನ್ನೊಂದು ಕ್ರೀ ಕ್ರೀ ಎಂದು ರಾಗವೆಳೆಯುವುದು. ಮಣ್ಣಿನಡಿಯಲ್ಲಿ ಏಳು ತಿಂಗಳ ಬೇಸಿಗೆಯನ್ನು ಕಳೆದು ಅವು ಈಗ ಪುನಃ ಮಳೆ ಬಂದೊಡನೆ ಅವು ಮೇಲೆ ಬಂದು ತಮ್ಮ ಬಿಡುಗಡೆಯ ಸಂತೋಷವನ್ನೊ, ಮಳೆ ನೀರಿನ ತಂಪಿನ ಸ್ಪರ್ಶಸುಖವನ್ನೋ ಈ ಸಂಕೀರ್ಣ ಸ್ವರಗಳ ಮೂಲಕ ಎಡೆಬಿಡದೆವ್ಯಕ್ತಪಡಿಸುತ್ತಿವೆ. ಮತ್ತೆ ಕೀಟಗಳ ಶಬ್ದ ಬೇರೆಯೇ, ಆ ಶಬ್ದಗಳಿಗೆ ತುದಿಮೊದಲಿಲ್ಲ. ಯಾವ ಕಡೆಯಿಂದ ಯಾವ ಧ್ವನಿ ಹೊರಡುತ್ತಿದೆಯೆಂದು ಹೇಳಲು ಸಾಧ್ಯವಿಲ್ಲ. ನಾರಾಯಣನಿಗೆ ಆಗ ತಾನು ಸೆರೆಮನೆಯಲ್ಲಿ ಸಿಕ್ಕಿಬಿದ್ದೆನೆಂದು ಭಾಸವಾಗುತ್ತಿತ್ತು. ಅಲ್ಲಿಂದ ಬೆಳಗಾಗುವವರೆಗೂ ಪಾರಾಗುವ ಉಪಾಯ ಅವನಿಗೆ ತೋರುತ್ತಿದ್ದಿಲ್ಲ.

ಅಷ್ಟರಲ್ಲೇ ಆಕಾಶದಲ್ಲಿ ಮಿಂಚು ಹಾರತೊಡಗಿತು. ಸಿಡಿಲಿನ ಶಬ್ದವೂ ಒಂದೆರಡು ಬಾರಿ ಆಯಿತು. ಅದರೊಡನೆ ಜಡಿ ಮಳೆಯೂ

ಭೋರಿಡುತ್ತ ಬಂತು. ನಾರಾಯಣ ಬೇಗಬೇಗನೆ ಗದ್ದೆಯಿಂದ ಮೇಲೆ ಹತ್ತುವ ಮೆಟ್ಟಲುಗಳನ್ನು ಹುಡುಕತೊಡಗಿದ. ಒಂದೆಡೆ ತುಸು ಎತ್ತರದಲ್ಲಿ ಒಂದು ಕಲ್ಲು ಹೊರಚಾಚಿತ್ತು. ಅದಕ್ಕಾದರೂ ಕಾಲಿಟ್ಟು ಮೇಲೇರೋಣವೆಂದು ಅದರ ಮೇಲೆ ಒಂದು ಕಾಲಿಟ್ಟು ಮತ್ತೊಂದು ಕಾಲನ್ನು ಇನ್ನೊಂದು ಕಡೆ ಇಡಲು ಅವನು ಯತ್ನಿಸುತ್ತಿದ್ದಾಗಲೇ ಆ ಕಲ್ಲು ತುಂಡು ಕೆಳಗೆ ಕುಸಿದುಬಿತ್ತು. ಅದರೊಡನೆಯೇ ಅವನು ಪುನಃ ಗದ್ದೆಗೆ ಬಿದ್ದ. ಕೈಕಾಲುಗಳಿಗೆ ಸ್ವಲ್ಪ ಗಾಯಗಳಾದುವು. ಮೈಯ್ಯೆಲ್ಲೆಲ್ಲ ಇನ್ನೂ ಮಣ್ಣಾಯಿತು. ಗಾಯಗಳು ಉರಿಯತೊಡಗಿದವು. ಮಳೆ ಬಂತೇ ಬಂತು. ಅವನ ಮೈ ಮೇಲೆ ಭಾರವಾದ ನೀರ ಹನಿಗಳು ಧಾರೆಯಾಗಿ ಸುರಿದುವು. ತಲೆಯ ಕೂದಲುಗಳು ಒದ್ದೆಯಾಗಿ ಕಣ್ಣಮೇಲೆ, ಮೂಗಿನ ತುದಿಯಿಂದ, ಬಾಯಿಯ ಮೇಲೆ ಎಲ್ಲ ನೀರು ಹರಿಯತೊಡಗಿತು. ಅವನಿಗೆ ಶ್ವಾಸ ಬಿಡುವುದು ಕೂಡಾ ಒಂದು ಸಮಸ್ಯೆಯಾಯಿತು.

ಅವನು ಮೇಲೇರುವ ಮೆಟ್ಟಲು ಎಲ್ಲಿದೆಯೆಂದು ತುಂಬಾ ನೆನಪು ಮಾಡಿದ. ಅವನೇನಾದರೂ ಆ ದಾರಿಯಿಂದ ಬರುತ್ತಿರುವುದು ಇದು ಮೊದಲಬಾರಿಯಲ್ಲ: ಹೆಚ್ಚು ಕಡಿಮೆ ಹತ್ತು ವರ್ಷಗಳಿಂದ ಅವನು ಅಲ್ಲೇ ಸಮೀಪದ ಮನೆಯಲ್ಲಿ ವಾಸಿಸುತ್ತಿದ್ದವ. ಆದರೆ ಅವನಿಗೆ ಆ ತನಕ ಗದ್ದೆಗಿಳಿಯುವ ಇಲ್ಲವೇ ಗದ್ದೆಯಿಂದ ಮೇಲೆ ಹತ್ತುವ ಅವಕಾಶ ಬಂದೊದಗಿರಲಿಲ್ಲ. ಅಲ್ಲಿ ಗದ್ದೆಯಿದೆ ಎಂಬುದೂ ಅವನಿಗೆ ಹೆಚ್ಚಾಗಿ ಗೋಚರವಾಗುತ್ತಲೂ ಇರಲಿಲ್ಲ. ಮತ್ತೆ ಆ ಗದ್ದೆ ಯಾರದು, ಅದನ್ನು ಯಾರು ಸಾಗುವಳಿ ಮಾಡುತ್ತಾರೆ. ಅದರಲ್ಲಿ ಅಕ್ಕಿಯಲ್ಲದೆ ಬೇರೇನು ಬೆಳೆ ಬೆಯುತ್ತದೆ ಇತ್ಯಾದಿ ಮಾಹಿತಿಗಳನ್ನು ಅವನು ಎಂದೂ ಸಂಗ್ರಹಿಸಿದ್ದಿಲ್ಲ. ಅವನ್ನು ಸಂಗ್ರಹಿಸುವ ಅವಶ್ಯಕತೆಯೂ ಅವನಿಗೆ ಆ ತನಕ ತೋರಿದ್ದಿಲ್ಲ. ಅವನಿಗೆ ಆ ವಠಾರದೊಡನೆ ಸಂಬಂಧ ಅವನ ಮನೆಯ ಮೂಲಕ ಮಾತ್ರ ಆಗಿತ್ತು. ಮನೆಯಲ್ಲೂ ಹೆಚ್ಚಾಗಿ ಅವನು ರಾತ್ರಿ ಹೊತ್ತಿನಲ್ಲಿ ಮಾತ್ರ ಇರುವವ. ಬೆಳಿಗ್ಗೆ ಐದು ಗಂಟೆಯಾಗುವ ಮೊದಲೇ ಅವನು ಅಲ್ಲಿಂದ ಹೊರಟುಹೋಗುವನು. ಹಗಲಲ್ಲಿ ಅವನು ತನ್ನ ಮನೆಯನ್ನು ನೋಡಿದುದು ಬಹಳ ಅಪರೂಪದಲ್ಲಿ. ರಾತ್ರಿ ಹಿಂದಿ

ರುಗುವಾಗ ಕೆಲವೊಮ್ಮೆ ಮಧ್ಯರಾತ್ರಿಯಾಗುವುದೂ ಇತ್ತು. ಕೆಲವು ಸಲ ಮನೆಗೆ ಬಾರದಿರುವುದೂ ಇತ್ತು. ಮತ್ತೆ ತಿಂಗಳುಗಟ್ಟಲೆಯಾಗಿ ಮನೆ ಬಿಟ್ಟು ಇರುವ ಸಂದರ್ಭಗಳೂ ಅವನಿಗೆ ಆಗಾಗ ಬರುತ್ತಿದ್ದುವು.

ಗದ್ದೆಯ ಬದಿಯಿಂದಲೇ ಹೋಗುತ್ತ ಹೋಗುತ್ತ ಅವನು ತೋಡಿನ ಬಳಿಗೆ ಬಂದ. ಅದರಲ್ಲಿ ನೀರು ಹರಿಯುವ ಶಬ್ದ ಮಾತ್ರ ಕೇಳುತ್ತಿತ್ತಲ್ಲದೆ, ಅದು ಕಾಣುತ್ತಿದ್ದಿಲ್ಲ. ಅದರ ಅಂಚಿನಲ್ಲಿದ್ದ ಮುಳ್ಳಿನ ಗಿಡಗಳ ಮೇಲೆ ಕಾಲಿಡುವಾಗ ಅವನಿಗೆ ಪ್ರಾಣವೇ ಹೋದಂತಾಯಿತು. ಕಾಲುಗಳಲ್ಲಿ ಮುಳ್ಳುಗಳು ಚುಚ್ಚಿಕೊಳ್ಳುವಾಗ ಅವನ ಕಣ್ಣಿನಲ್ಲಿ ನೀರು ಬಂತು. ಒಮ್ಮೆ ಅವನಿಗೆ ಕೆಳಗೆ ತೋಡಿಗೆ ಇಳಿದುಬಿಡೋಣವೆಂದು ತೋರಿತು. ಆದರೆ ಅದರಲ್ಲಿ ಹೆಚ್ಚು ನೀರಿರಬಹುದೆಂಬ ಭಯವಾಯಿತು, ಮತ್ತೆ. ಅವನಿಗೆ ಅದರಲ್ಲಿ ಈಜಲೂ ತ್ರಾಣವಿರಲಿಲ್ಲ. ಕೊನೆಗೆ ಅಲ್ಲೇ ಒಂದು ದಿಣ್ಣೆ ಅವನ ಕೈಗೆ ತಗಲಿತು. ಆದನ್ನೇರಿ ಕುಳಿತುಕೊಂಡ.

ಏನು ವಿಸ್ಮಯ ತನಗಿದು ಸಂಭವಿಸಿದುದು ಎಂದು ಆಗ ಅವನಿಗೆ ತೋರಿತು. ಯಾರೋ ಎಲ್ಲ ರಾತ್ರಿಯಲ್ಲಿ ದಾರಿ ತಪ್ಪಿಹೋಗುವ ಕತೆಗಳನ್ನು ಹೇಳಿದುದು ಅವನ ನೆನಪಿಗೆ ಆಗ ಬಂದವು. ಏನೋ ಒಂದು ತರಹದ ಹುಲ್ಲು ಇದೆಯಂತೆ. ಅದು ಕಾಲಿಗೆ ಸೋಂಕಿದರೆ ಸಾಕು. ಆ ಮೇಲೆ ದಾರಿಯ ಭ್ರಮೆ ಆರಂಭವಾಗುವುದು. ಎಲ್ಲೆಲ್ಲಿ ತಿರುಗಿದರೂ ಮತ್ತೆ ಬೆಳಗಾಗುವ ತನಕವೂ ದಾರಿ ಕಾಣಸಿಗದಂತೆ. ಮತ್ತೆ ಕೆಲವರು ಭೂತಗಳ ಕತೆಯನ್ನು ಹೇಳಿದ್ದರು. ಭೂತದ ಉಪದ್ರವದಿಂದಾಗಿ ದಾರಿ ಕಾಣಿಸದೆ ಎಷ್ಟೋ ಜನ ರಾತ್ರಿಯಿಡೀ ಅಲೆಯುವವರಿರುವರಂತೆ. ಅದೂ ಕಲ್ಲುರ್ಟಿ ಎಂಬ ಹೆಣ್ಣು ಭೂತದ ಮಹಿಮೆಯೆಂದರೆ ಮಹಿಮೆಯೇ. ಅದು ಉಪದ್ರವ ಕೊಡತೊಡಗಿತೆಂದರೆ ಮತ್ತೆ ಅದನ್ನೆದುರಿಸಲು ಪ್ರಸಿದ್ಧ ಮಂತ್ರವಾದಿಗಳ ಸಹಾಯವೇ ಬೇಕು. ನಾರಾಯಣ ಆ ಭೂತ ಪೀಡೆಗೊಳಗಾದ ಒಬ್ಬಿಬ್ಬರನ್ನು ನೋಡಿಯೂ ಇದ್ದ. ಅವರಿಗೆ ಏನನ್ನು ಕಂಡರೂ ವಿಭ್ರಮೆಯಾಗುತ್ತಿತ್ತು: ಅವರ ಕಣ್ಣಿಗೆ ಏನೇನೋ ತೋರುತ್ತಿತ್ತು. ಊಟಕ್ಕೆ ಕುಳಿತರೆ ಅನ್ನಕ್ಕೆ ಅಮೇಧ್ಯ ಬೆರೆತ್ತೆನ್ನುವರು. ವಸ್ತ್ರದಲ್ಲಿ ಮೂತ್ರವಿದೆಯೆಂದು ಅದನ್ನು ತೆಗೆದು ಬಿಸಾಡುವರು. ಹಾಗೆಯೇ

ತನಗೇನಾದರೂ ಕಣ್ಣು ಕಟ್ಟಿದಂತಾಯಿತೇ ಎಂದು ಆಶ್ಚರ್ಯಪಟ್ಟ. ಆದರೆ ಇಲ್ಲಿ ಅಂಥ ಅಮಾನುಷ ಶಕ್ತಿಗಳ ಕೈವಾಡವಿಲ್ಲವೆಂಬುವರಲ್ಲಿ ಸಂಶಯವಿರಲಿಲ್ಲ. ತಾನಾಗಿಯೇ ಜಾರಿ ಕೆಳಗೆ ಬಿದ್ದೆ. ಮೇಲೆ ಹತ್ತುವ ದಾರಿ ತನಗೆ ಗೊತ್ತಿರಲಿಲ್ಲ. ಹಾಗಾಗಿ ಹೀಗೆ ಗೋಡಿನಲ್ಲಿ ಬಿದ್ದಂತಾಗಿದ್ದೇನೆ ಎಂದು ಮತ್ತೆ ಅವನು ಭಾವಿಸಿದ.

ಕೈಕಾಲುಗಳು ದಣಿದಿದ್ದುವು ಮಾತ್ರವಲ್ಲ, ಅವನ ಊಟದ ಸಮಯವೂ ದಾಟುತ್ತಿತ್ತು. ಹೊಟ್ಟೆಯಲ್ಲಿ ಆಗಲೇ ಹಸಿವಾಗುತ್ತಿತ್ತು. ಒಂದೆಡೆಯಿಂದ ಬಾಯಾರಿಕೆಯೂ ಆಗುತ್ತಿತ್ತು. ಮನಸ್ಸು ಉದ್ವಿಗ್ನವಾಗಿ ಬಳಲಿಹೋಗಿತ್ತು. ಕಣ್ಣಿನಲ್ಲಿ ತುಸು ನಿದ್ದೆಯ ಜೊಂಪೂ ಹಿಡಿಯುತ್ತಿತ್ತು. ಆರೇಳು ಸಲ ಆಕಳಿಸಿದ. ಕಾಲುಗಳು ನೀರಿನಲ್ಲಿ ಮರದಂತಾಗಿದ್ದುವು. ಅಂಗಿ ಇಜಾರಗಳಿಂದ ಇನ್ನೂ ನೀರು ಸುರಿಯುತ್ತಿತ್ತು.

ಮತ್ತೆ ಆಕಾಶದಲ್ಲಿ ಮಿಂಚು ಮಿಂಚಲು ಪ್ರಾರಂಭವಾಯಿತು. ಅದರ ಬೆಳಕಿಗೆ ಕ್ಷಣಕಾಲ ಭೂಮಿಯಿಡೀ ಬೆಳ್ಳಿಯಂತೆ ಕಾಣುವುದು. ಆದರೆ ಮತ್ತೊಂದು ಕ್ಷಣದಲ್ಲಿ ಪುನಃ ಕತ್ತಲೆ. ನಾರಾಯಣ ಹಾಗೆಯೇ ಅದರ ಬೆಳಕಿಗೆ ಕೆಲವು ಹೆಜ್ಜೆ ಹೋದ. ಒಮ್ಮೆ ಅವನ ಕಣ್ಣಿಗೆ ಹೊಳೆಯುವ ಮಿಂಚು ಭ್ರಮೆಯನ್ನುಂಟುಮಾಡಿತು. ಅವನು ಆಗ ತೋಡಿನ ನೀರಿನಲ್ಲಿ ಬೀಳುವುದರಲ್ಲಿದ್ದ. ಆದರೆ ಅಲ್ಲೇ ಇದ್ದ ಸಣ್ಣ ಮರದ ಆಧಾರದಿಂದ ಅವನು ಕೆಳಗೆ ಬೀಳಲಿಲ್ಲ.

ಅವನು ಹಾಗೆಯೇ ಎಡವುತ್ತ ತಡವುತ್ತ ತೋಡಿನ ಅಂಚಿನಿಂದಲೇ ಮುಂದರಿಯುವಾಗ ಅವನ ಕಾಲಿನ ಮೇಲೆ ಏನೋ ತಣ್ಣಗಿನ ವಸ್ತು ಹರಿದಂತಾಯಿತು. ಅದರ ಮೈ ನುಣ್ಣಗೆ ಇತ್ತು. ಅವನಿಗೆ ಫಕ್ಕನೆ ಗಾಬರಿಯಾಯಿತು. ಇಟ್ಟ ಹೆಜ್ಜೆಯನ್ನು ಕೂಡಲೇ ಹಿಂದಕ್ಕೆಳೆದ. ಅಷ್ಟರಲ್ಲಿ ಅಲ್ಲಿ ಹಾವು ಬುಸುಗುಟ್ಟುವ ಸ್ವರ ಕೇಳಿಸಿತು. ಆ ಕಡೆ ಅವನು ನೋಡುತ್ತಿದ್ದಾಗಲೇ ಇನ್ನೂ ಒಂದೆರಡು ಮಿಂಚುಗಳು ಮಿಂಚಿದವು. ಆಗ ಅವನಿಗೆ ತಾನು ಹಾವಿನಿಂದ ಕೇವಲ ಒಂದು ಮಾರು ದೂರದಲ್ಲಿರುವೆನೆಂಬ ಅರಿವಾಯಿತು. ಅದು ಹೆಡೆಯನ್ನು ಬಿಡಿಸಿ ಅವನನ್ನೇ ನೋಡುತ್ತಿತ್ತು. ಅದರ ಮೈಮೇಲಿದ್ದ ನೀರಿನ ಪರೆ ಮಿಂಚಿನ ಬೆಳಕಿಗೆ

ಹೊಳೆಯುತ್ತಿತ್ತು. ಅವನಿಗೆ ಅಲ್ಲಿಂದ ಓಡೋಣವೆಂದು ತೋರಿದರೂ ಓಡಲು ಮನಸ್ಸು ಬರಲಿಲ್ಲ. ಅದೂ ಉದ್ರಿಕ್ತಗೊಂಡ ನಾಗರ ಹಾವಿನ ಸಮೀಪದಿಂದ ಓಡುವುದೆಂದರೆ ಸುರಕ್ಷಿತ ಉಪಾಯವಲ್ಲ. ಅದು ಓಡಿಸಿ ಕೊಂಡು ಬಂದು ತನ್ನನ್ನು ಕಚ್ಚೀತೆಂದು ಅವನಿಗೆ ಭಯವಾಯಿತು. ಒಂದು ವೇಳೆ ತಾನು ಓಡಿ ಅದನ್ನು ತಪ್ಪಿಸಿಕೊಂಡರೂ ಅದು ತನ್ನ ಮೇಲಿನ ಹಗೆತನವನ್ನು ಬಿಟ್ಟೀತೆ? ತನ್ನ ಮನೆಗೆ ಬಂದೂ ಅದು ತನ್ನನ್ನು ಕಚ್ಚಬಹುದು. ಹೀಗೆಂದು ನೆನಸಿ ಅವನು ನಿಂತಲ್ಲಿಂದ ಕದ ಲದೇ ಅದನ್ನೇ ನೋಡಿದ. ಅದೂ ಎತ್ತಿದ ಹೆಡೆಯನ್ನು ಸ್ವಲ್ಪ ಹೊತ್ತು ಮಡಚಲಿಲ್ಲ. ಬುಸುಗುಟ್ಟುವುದನ್ನು ಮಾತ್ರ ನಿಲ್ಲಿಸಿತು. ಮಿಂಚಿನ ಬೆಳ ಕಿಗೆ ಅದರ ಕೇದಿಗೆಯ ಮೈಬಣ್ಣ ಅವನಿಗೆ ಕಾಣುತ್ತಿತ್ತು. ನಾಲಿಗೆಯನ್ನು ಅದು ಆಗಾಗ ಬಾಯಿಯ ಹೊರಗೆ ಹಾಕುತ್ತಿತ್ತು. ಸ್ವಲ್ಪ ಹೊತ್ತು ಹಾಗೆಯೇ ನಿಂತು ಅವನಿಗೆ ಅದರ ಭಯ ಕಡಿಮೆಯಾಯಿತು. ಅದೂ ತನ್ನ ಹಾಗೆಯೇ ಜೀವವನ್ನುಳಿಸಿಕೊಳ್ಳಲಿಕ್ಕಾಗಿ ಹೀಗೆ ಮಾಡುತ್ತಿದೆ ಎಂದು ಅವನು ಕಲ್ಪಿಸಿದ.

ಗಂಟೆ ಹೊಡೆಯುವುದು ದೂರದಿಂದ ಕೇಳುತ್ತಿತ್ತು. ಅವನು ಎಣಿಕೆ ಮಾಡಿದ. ಹನ್ನೊಂದು ಪೆಟ್ಟು. ಅಷ್ಟು ಹೊತ್ತಿಗೆ ಅವನು ಊಟಮಾಡಿ ಮಲಗುವವ. ಇನ್ನು ಬೆಳಗಾಗುವ ತನಕವೂ ಹೀಗೆಯೇ ಇದ್ದರೆ ನಾನು ಚಳಿಯಲ್ಲೇ ಸತ್ತುಹೋಗಲೂಬಹುದೆಂದು ಅವನು ಹೆದರಿದ್ದ. ಕಪ್ಪೆಗಳು ಮತ್ತು ಕ್ರಿಮಿಕೀಟಗಳು ಮಾತ್ರ ಇನ್ನೂ ಕೂಗು ತ್ತಿದ್ದುವು.

ಅಷ್ಟರಲ್ಲಿ ದೂರದಲ್ಲೊಂದು ಬೆಳಕು ಕಂಡಿತವನಿಗೆ. ಆ ಗದ್ದೆಯ ಮೇಲಿನ ದಾರಿಯ ಕಡೆಗೆ ಅದು ಸಾಗುತ್ತಿತ್ತು. ಆಗಲೂ ಅವನಿಗೆ ಭೂತಗಳ ನೆನಪಾಯಿತು. ರಾತ್ರಿಯಲ್ಲಿ ಸಂಚರಿಸುವ ಕೆಲವು ಪ್ರೇತಗಳ ದಂತಕತೆಗಳನ್ನೂ ಅವನು ಹಿಂದೆ ಕೇಳಿದ್ದ. ಅಲ್ಲೇ ಒಂದು ಭೂತದ ಸ್ಥಾನವಿತ್ತು. ಅದರಲ್ಲಿ ವರ್ಷ ವರ್ಷವೂ ಭೂತದ ಆರಾಧನೆ ನಡೆಯು ತ್ತಿತ್ತು. ಏಳೆಂಟು ಕೋಳಿಗಳು ನಾಲ್ಕೈದು ಕುರಿಗಳು ಆ ಭೂತಕ್ಕೆ ಬಲಿಯಾಗಿ ಕಡಿಯಲ್ಪಡಬೇಕಿತ್ತು. ಅದು ಬಹಳ ಪ್ರತಾಪದ ಭೂತ

ವೆಂದು ನಾರಾಯಣ ತಿಳಿದಿದ್ದ. ಆ ವಠಾರದಲ್ಲಿ ಸತ್ತ ಪ್ರತಿಯೊಂದು
ವ್ಯಕ್ತಿಯ ಮೇಲೂ ಆ ಭೂತದ ಕೈವಾಡವಿತ್ತೆಂದು ಜನರ ನಂಬಿಕೆ.
ಅದರ ಪೀಡೆಯಿಂದ ಸತ್ತ ಒಬ್ಬ ಭಟ್ಟರು ಬ್ರಹ್ಮರಾಕ್ಷಸನಾಗಿ ರಾತ್ರಿ
ಯಲ್ಲಿ ಬೊಬ್ಬಿಡುತ್ತ ತಿರುಗಾಡುತ್ತಿರುವರಂತೆ. ಮತ್ತೊಬ್ಬ ಹೆಂಗಸು
ಸತ್ತು ಮಾಸ್ತಿಯಾಗಿ ಹಲವು ಜನರ ಮರಣಕ್ಕೆ ಕಾರಣಳಾದಳಂತೆ.
ಇನ್ನು ಕೆಲವರು ಸತ್ತು ಪಿಶಾಚಿಗಳಾಗಿ ಆ ಭೂತದೊಡನೆ ಕೂಡಿಕೊಂ
ಡಿರುವರಂತೆ. ಒಬ್ಬ ಮಾಪಿಳ್ಳೆ ಅಲ್ಲಿ ನೀರಿಲ್ಲದೆ ಪ್ರಾಣಬಿಟ್ಟಿದ್ದನಂತೆ.
ಅವನು ಈಗ 'ರಣ' ವಾಗಿ ಅನೇಕರನ್ನು ಹೆದರಿಸಿದ್ದಾನಂತೆ, ಕೆಲವ
ರನ್ನು ಕೊಂದಿರುವನಂತೆ. ಅವರೆಲ್ಲರೂ ನಡುರಾತ್ರಿಗೆ ಪಂಜುಗಳನ್ನು
ಹಿಡಿದುಕೊಂಡು ಊರಿಡೀ ಸುತ್ತುವರಂತೆ. ಕೆಲವು ವೇಳೆ ಆರ್ಭಟಿ
ಸುವರಂತೆ. ನಾರಾಯಣನ ಮನೆಯವರೂ ಈ ಆರ್ಭಟೆಯ ಶಬ್ದ
ವನ್ನು ತಾವು ಕೇಳಿದ್ದೇವೆಂದು ಅನೇಕ ಬಾರಿ ಅವನೊಡನೆ ಹೇಳಿದ್ದರು.
ಆದರೆ ಅವನು ಈ ಕತೆಗಳೆನ್ನೊಂದೂ ನಂಬಿರಲಿಲ್ಲ. ಅವನೇ ಎಷ್ಟೋ
ಬಾರಿ ಮಧ್ಯರಾತ್ರಿಯಲ್ಲಿ ಆ ದಾರಿಯಲ್ಲಿ ಬಂದಿದ್ದ. ಅವನಿಗೆ
ಏನೊಂದೂ ಶಬ್ದವಾಗಲೀ, ಬೆಳಕಾಗಲೀ ಆ ತನಕ ಗೋಚರವಾದ
ದ್ದಿಲ್ಲ. ಅಲ್ಲಿ ಮನೆಗಳು ಖಾಲಿ ಬಿದ್ದರೂ ಕೂಡಾ ಜನರು ಅಲ್ಲಿ ವಾಸಿಸ
ಲಿಕ್ಕೆ ಬರುವುದು ಕಡಿಮೆ. ಅಲ್ಲಿ ಇದ್ದವರಿಗಂತೂ ಮನೆ ಬಾಡಿಗೆ ಬಹಳ
ಕಡಿಮೆ. ಆ ಬೆಳಕನ್ನು ಕಂಡಾಗ ನಾರಾಯಣನಿಗೆ ಈ ಆಲೋಚನೆಗಳು
ಬರತೊಡಗಿದುವು. ಅದು ನೇರವಾಗಿ ಬರುತ್ತಿದ್ದಿಲ್ಲ. ಅದನ್ನು ಹಿಡಿದು
ಕೊಂಡವರೂ ಸ್ಪಷ್ಟವಾಗಿ ಕಾಣುತ್ತಿದ್ದಿಲ್ಲ. ಅದರ ಹಿಂದೆ ಸ್ವಲ್ಪ
ಸ್ವಲ್ಪ ಸಮಯದಲ್ಲಿ ಇನ್ನೊಂದು ಬೆಳಕು ಕಾಣಿಸಿಕೊಂಡಿತು. ನಾರಾ
ಯಣನಿಗೆ ಈಗ ಸಂಶಯ ಬಲವಾಯಿತು. ಆದರೆ ಭೂತಗಳು ತನ್ನ
ನ್ನೇನು ಮಾಡಬಲ್ಲವು ಎಂದುಕೊಂಡು ಅವನು ಸುಮ್ಮನಾದ.

ಮತ್ತೆ ತುಸುಹೊತ್ತಿನಲ್ಲಿ ಆ ಬೆಳಕು ಇನ್ನೂ ಹತ್ತಿರ ಬಂತು. ಆಗ
ಅವನಿಗೆ ಅದರೊಡನೆ ಜನರೂ ಕಾಣಿಸಿಕೊಂಡರು. ಅನಂತರ ಅವರು
ಮಾತಾಡುವುದೂ ಅವನಿಗೆ ಕೇಳಿತು. ಒಮ್ಮೆಲೇ ಅವನು ಗದ್ದೆಯಿಂ

ಚಿನ ದಾರಿಯ ಬಳಿಗೆ ಬೇಗ ಬೇಗನೆ ಕಾಲು ಹಾಕಿದ. ಅವನಿಗೆ ಆಗ ಯಾವ ಅಂಜಿಕೆಯೂ ಇರಲಿಲ್ಲ. ಹೇಗಾದರೂ ಈ ಕೆಸರ ರಾಶಿಯಿಂದ ಮೇಲೆ ಬಿದ್ದರೆ ಸಾಕೆಂದು ಅವನು ತವಕಪಟ್ಟ.

"ಏನದು ಗದ್ದೆಯಲ್ಲಿ ನಡೆಯುವ ಸಪ್ಪಳ ಕೇಳುತ್ತಿದೆ. ಎತ್ತುಗಳಿಲ್ಲಿಯಾದರೂ ತಪ್ಪಿಸಿಕೊಂಡು ಬಂದಿವೆಯೆ ?" ಎಂದು ಬೆಳಕಿನೊಡನೆ ಬರುತ್ತಿದ್ದ ಒಬ್ಬನು ಕೇಳುತ್ತಿದ್ದುದು ನಾರಾಯಣನಿಗೆ ಕೇಳಿತು.

"ಏನೋ ಇವತ್ತು ಮಳೆಯೂ ವಿಪರೀತ ಬಂದಿದೆಯಲ್ಲ ? ಎಲಾದರೂ ನೀರು ನಾಯಿಗಳು ಗದ್ದೆಗೆ ಬಂದಿರುವುವೋ ಏನೋ! ಮೀನುಗಳನ್ನು ಹೆಕ್ಕಿ ತಿನ್ನುತ್ತಿರಬೇಕು."

"ಎಲ್ಲಾದರೂ ಜಾರಿ ಬೀಳಬೇಡಿ ! ಮಣ್ಣು ಹಸಿಯಾಗಿದೆ—ಗದ್ದೆಗೆ ಬಿದ್ದರೆ ಮತ್ತೆ ಬೆಳಿಗ್ಗೆಯೇ ನಿಮ್ಮನ್ನು ಎತ್ತಬೇಕಷ್ಟೆ!" ಎಂದು ಇನ್ನೊಬ್ಬ ಧ್ವನಿಕೂಡಿಸಿದ.

"ಹೌದೌದು. ನೀರು ನಾಯಿಗಳ ಸುದ್ದಿ ಮಾತಾಡಿ ಅವನ್ನು ಹುಡುಕುತ್ತ ಹೋಗಬೇಡಿ. ದಾರಿಯನ್ನು ನೋಡಿಕೊಳ್ಳಿ" ಎಂದು ಮತ್ತೊಬ್ಬನೆಂದ.

ನಾರಾಯಣ ಒಂದೇ ಸವನೆ ಹೆಜ್ಜೆ ಹಾಕುತ್ತಿದ್ದ. ಆವರೆ ಕಾಲುಗಳು ಕೆಸರಿನಲ್ಲಿ ಹೂತುಹೋಗುತ್ತಿದ್ದವು. ಆಗ ಅವನ ಕಾಲಿನಲ್ಲಿದ್ದ ಮುಳ್ಳುಗಳೆಲ್ಲ ಚುಚ್ಚುವುವು. ಅದನ್ನು ಪುನಃ ಎತ್ತುವಾಗ ಅವನಿಗೆ ಪ್ರಾಣವನ್ನೇ ಹಿಂಡಿದಂತಾಗುತ್ತಿತ್ತು.

"ಯಾರೋ ನರಮನುಷ್ಯರೆಂದು ಕಾಣುತ್ತದಲ್ಲ ? ಅದೇನು ತಲೆಯ ಹಾಗೆ ಕಾಣುತ್ತದೆ ? ನೋಡಿ ನೋಡಿ", ಎಂದನೊಬ್ಬ ಮತ್ತೆ.

"ಹೂ, ಹುಂ. ಹೋಗೋಣ ಬೇಗ. ಹೌದು ನರಮನುಷ್ಯ. ನಿಮಗೆ ಏನೆಲ್ಲ ಕಾಣುತ್ತದೆ ! ನಡೆಯಿರಿ ನೋಡುವ. ದಾರಿ ನೋಡುವುದು ಬಿಟ್ಟು ಎಲ್ಲೆಲ್ಲಿ ನೋಡಿ ಸಾಯಬೇಡಿ !" ಎಂದು ಇನ್ನೊಬ್ಬ ಗದರಿಸಿದ.

ನಾರಾಯಣನಿಗೆ ತಾನು ಗದ್ದೆಯ ಅಂಚಿನ ಸಮೀಪ ಹೋಗುವು

ದರೊಳಗೆ ಅವರು ಮುಂದುವರಿದುಬಿಟ್ಟಾರೆಂದು ಭಯವಾಯಿತು. ಹಾಗೆಯೇ ಅವನು ಚಪ್ಪಾಳೆ ಬಡೆದ.

"ಯಾರದು ?" ಎಂದು ಮೇಲಿನಿಂದ ಕೇಳಿದರು.

"ಇಲ್ಲಿಂದ ಮೇಲೆ ಹತ್ತುವ ದಾರಿ ಎಲ್ಲಿದೆ ?" ಎಂದು ನಾರಾಯಣ ಪ್ರಶ್ನಿಸಿದ.

"ಮೇಲೆ ಎಂದರೆ, ಎಲ್ಲಿ ಆಕಾಶಕ್ಕೋ ?" ಎಂದು ಒಬ್ಬರು ನಕ್ಕರು.

"ಸ್ವಲ್ಪ ನಿಲ್ಲಿ. ನಾನು ಬಂದೆ" ಎನ್ನುತ್ತ ನಾರಾಯಣ ಮುಂದೆ ಮುಂದೆ ಹೆಜ್ಜೆ ಹಾಕಿದ.

ಮೇಲಿದ್ದವರಿಗೆ ಅದು ಮನುಷ್ಯನೇ ಹೌದೆಂದು ಕೊನೆಗೆ ತೋರಿ ರಬೇಕು. ಅವನಿಗೆ ಕಾಟೀವಂತೆ ಲಾಟಾನನ್ನು ಕೆಳಗೆ ಹಿಡಿದರು.

"ದಾರಿಯೆಲ್ಲಿ ?" ಎಂದು ನಾರಾಯಣ ಕೇಳಿದ.

"ದಾರಿಗೆ ಇನ್ನೂ ಆಚೆ ಹೋಗಬೇಕು, ಇಲ್ಲಿಗೇ ಬಾ. ನಾವು ಹೇಗಾದರೂ ಮೇಲೆ ಎಳೆಯುತ್ತೇವೆ."

"ಆದರೆ ನಮ್ಮನ್ನೂ ಗದ್ದೆಗೆ ಎಲ್ಲಾದರೂ ಎಳೆದುಹಾಕಬೇಡ ಮಹಾರಾಯಾ !" ಎಂದು ಒಬ್ಬ ನಕ್ಕ.

"ಇಲ್ಲಪ್ಪ! ನನ್ನನ್ನು ಮೇಲೆ ಎಳೆಯಿರಿ", ಎಂದು ನಾರಾಯಣ ಅಳು ದನಿಯಲ್ಲಿ ಹೇಳಿ ಅವರು ನಿಂತದ್ದಲ್ಲಿಗೆ ಹೋದ.

"ನಿನಗೇನು ಗ್ರಹಚಾರ ಹಿಡಿಯಿತಪ್ಪ ! ಏನಾದರೂ ಇಲ್ಲಿಯ ಭೂತ ಬಿಲ್ಲರಾಯ ನಿನ್ನನ್ನು ನೂಕಿದನೆ ?" ಎನ್ನುತ್ತ ಒಬ್ಬ ಬಗ್ಗಿ ನಾರಾಯಣನಿಗೆ ಕೈಕೊಟ್ಟ.

"ನನಗೆ ಎಟಕುವುದಿಲ್ಲ" ಎಂದು ನಾರಾಯಣ ನಿರಾಶೆಯಲ್ಲಿ ಹೇಳಿದ. ಅವನಿಗೆ ಕೈ ಹಿಡಿದು ಮೇಲೆ ಹತ್ತುವ ತ್ರಾಣವೂ ಇರಲಿಲ್ಲ.

"ಹೂಂ. ಹಾಗಾದರೆ ನಿನಗೊಂದು ಏಣಿ ತರಬೇಕು !" ಎಂದು ಮೇಲಿನಿಂದ ಇನ್ನೊಬ್ಬ ಗಹಗಹಿಸಿ ನಕ್ಕ. "ಏನಾದರೂ ತೆಂಗಿನ ಮರಕ್ಕೋ ಮಾವಿನ ಮರಕ್ಕೋ ಏರಲಿಕ್ಕೆ ಹೋಗಿದ್ದಿಯಾ ?.... ಅಲ್ಲಿ

ಮೆಟ್ಟಲಿವೆ. ಅಲ್ಲಿವರೆಗೆ ಹೇಗಾವರೂ ಬಾ. ನಾವು ದೀಪ ಹಿಡಿದು ಕೊಂಡು ಬರುತ್ತೇವೆ."

ನಾರಾಯಣ ಹೇಗಾದರೂ ಗದ್ದೆಯ ಅಂಚಿಗೆ ಒಂದು ಕೈಯ್ಯನ್ನೂರಿ ವಾಲುತ್ತ ವಾಲುತ್ತ ಅವರನ್ನು ಹಿಂಬಾಲಿಸಿದ. ಸ್ವಲ್ಪ ಮುಂದೆ ಹೋಗುವಾಗ ಅವನ ಕಾಲಿಗೆ ಒಂದು ಬೂಟ್ಸು ತಗಲಿತು. ಆಗತಾನೇ ಅವನಿಗೆ ತನ್ನ ಕಾಲು ಬರಿದಾಗಿದೆ ಎಂದು ತಿಳಿದುದು. ಅದನ್ನು ಹೆಕ್ಕಿ ಕೊಂಡು ಮತ್ತೊಂದನ್ನು ಹುಡುಕ ತೊಡಗಿದ.

"ಏನು ಮಾಡುತ್ತೀ ಮಹಾರಾಯಾ ಅಲ್ಲಿ? ನಮ್ಮನ್ನು ಹೋಗಲು ಬಿಡುವುದಿಲ್ಲವೇ ?" ಎಂದು ಲಾಟೀನನ್ನು ಹಿಡಿದುಕೊಂಡವ ಕೇಳಿದ.

"ನನ್ನ ಒಂದು ಪಕೇಟು ಇಲ್ಲಿ ಬಿದ್ದಿದೆ. ಸ್ವಲ್ಪ ದೀಪ ಕೊಡಿ. ನಾನೀಗ ಹುಡ್ಕಿ ಕೊಡ್ತೇನೆ", ಎಂದು ನಾರಾಯಣ ದೀನಸ್ವರದಲ್ಲಿ ಹೇಳಿದ. ಅವನಿಗೆ ಬೂಟ್ಸು ಹುಡುಕಲಿಕ್ಕೆ ದೀಪ ಬೇಕೆಂದು ಹೇಳಲು ನಾಚಿಕೆಯಾಯಿತು.

"ಆಯಿತು. ನಮಗೆ ಇದೇ ಕೆಲಸವೆಂದು ನೀನು ಭಾವಿಸಿರುವ ಹಾಗೆ ತೋರುತ್ತದೆ. ನಾಳೆ ನಿನಗೆ ಅದನ್ನು ಹುಡುಕಬಾರದೆ ? ಯಾರಾದರೂ ಕಳ್ಳರು ಅದನ್ನು ಕೊಂಡು ಹೋಗುತ್ತಾರೆಯೆ ? ನಮಗೆ ನಿದ್ದೆ ಮಾಡಲಿಕ್ಕಿಲ್ಲವೆ ? ನಿನಗಾದರೂ ಏನೂ ಹೆದರಿಕೆಯಿಲ್ಲ", ಎನ್ನುತ್ತ ಲಾಟೀನನ್ನು ಮೇಲೆ ನಿಂತವ ನಾರಾಯಣನಿಗೆ ಕೊಟ್ಟು "ಬೇಗ ಹುಡುಕು. ನಮಗೆ ತೂಕಡಿಕೆ ಹತ್ತಿದೆ" ಎಂದ.

ನಾರಾಯಣ ಲಾಟೀನನ್ನು ಒಂದು ಕೈಯಲ್ಲಿ ಹಿಡಿದುಕೊಂಡು ಇನ್ನೊಂದು ಕೈಯ್ಯಲ್ಲಿ ಕೆಸರನ್ನು ಮುಟ್ಟಿ ನೋಡುತ್ತಿದ್ದ. ಇನ್ನೊಂದು ಬೂಟ್ಸು ಅಲ್ಲೇ ಇತ್ತು. ಆದರೆ ಅವನ ಬಿಲ್ಲೆ ಬೇಗನೆ ಸಿಗಲಿಲ್ಲ.

"ತಡವಾಯಿತಪ್ಪ ನಮಗೆ" ಎಂದು ಮೇಲಿನಿಂದ ಒಬ್ಬ ಅವಸರ ಮಾಡಿದ.

"ಇನ್ನು ಒಂದು ಮಿನಿಟು. ಈಗ ಸಿಗ್ದಿದ್ರೆ ಮತ್ತೆ ನಾಳೆಯೇ ಹುಡ್ಕುತ್ತೇನೆ" ಎನ್ನುತ್ತ ನಾರಾಯಣ ಬೇಗಬೇಗನೇ ಕೆಸರನ್ನು ಹಿಂಡಿ ನೋಡುತ್ತಿದ್ದ.

ಎಷ್ಟು ನೋಡಿದರೂ ಅದು ಸಿಗಲಿಲ್ಲ. ಇನ್ನು ಹುಡುಕಿ ಪ್ರಯೋಜನವಿಲ್ಲವೆಂದು ಭಾವಿಸಿ ಅವನು ಮುಂದೆ ಹೆಜ್ಜೆಯಿಟ್ಟ. ಆಗಲೇ ಅವನ ಕಾಲಿಗದು ತಾಗಿದಂತಾಯಿತು. ಕೆಸರಿನೊಳಗೆ ಕೈ ಹಾಕಿದ. ಅದು ಸಿಕ್ಕಿತು.

"ಛಿ ! ನೀನು ನಮ್ಮನ್ನು ತ್ರಿಶಂಕು ಸ್ವರ್ಗದಲ್ಲಿ ಹಾಕಿಬಿಟ್ಟೆಯಲ್ಲ! ನೀನೂ ಬರೋದಿಲ್ಲ. ನಮ್ಮನ್ನೂ ಹೋಗಬಿಡೋದಿಲ್ಲ."

"ಆಯ್ತಣ್ಣ. ಇಗೊಳ್ಳಿ ಲಾಟೀನು", ಎಂದು ಲಾಟೀನನ್ನು ಅವರಿಗೆ ಕೊಟ್ಟು ಕೆಸರಿನಲ್ಲಿ ಕೆಳಗೆ ಅವನು ನಡೆಯತೊಡಗಿದ.

"ಇದೇ ಮೆಟ್ಟಲು. ಇಲ್ಲಿ ನೀನು ಏರು" ಎಂದು ಸ್ವಲ್ಪ ದೂರ ಹೋದ ಬಳಿಕ ಮೇಲಿನಿಂದ ಲಾಟೀನು ಕೊಂಡುಹೋಗುತ್ತಿದ್ದವ ನಿಂತ.

ನಾರಾಯಣ ಎರಡು ಬೂಟ್ಸುಗಳನ್ನು ಕೈಯಲ್ಲಿ ಹಿಡಿದುಕೊಂಡು ಮೆಲ್ಲನೆ ಮೆಟ್ಟಲು ಹತ್ತಿಕೊಂಡು ಮೇಲೆ ಬಂದ. ಆಗ ಅವನಿಗೆ ಅವರ ಗುರುತು ಸಿಕ್ಕಿದರೂ, ಅವರಿಗೆ ಅವನ ಗುರುತು ಸಿಗಲಿಲ್ಲ. ಅವನ ಕಾಲು ಬೆರಳಿನಿಂದ ತಲೆಯ ಕೂದಲ ತುದಿಯ ತನಕವೂ ಕೆಸರಾಗಿತ್ತು. ಅಲ್ಲದೆ ಕಾಲಿನಲ್ಲಿದ್ದ ಮುಳ್ಳುಗಳ ಚುಚ್ಚುವಿಕೆಯಿಂದಲೂ ಮೈಯಲ್ಲಾಗಿದ್ದ ಇತರ ಸಣ್ಣ ಗಾಯಗಳ ನೋವಿನಿಂದಲೂ ಅವನು ಬಾಗಿ ಹೋಗಿದ್ದ.

"ಏನಾದರೂ ಇಲ್ಲಿ ಕುಸ್ತಿ ಮಾಡಿದಿಯೇ ಮಹಾರಾಯಾ ?" ಎಂದು ಅವರಲ್ಲೊಬ್ಬ ನಾರಾಯಣನೊಡನೆ ನಗುತ್ತ ಕೇಳಿದ.

"ಜಾರಿ ಬಿದ್ದೆ" ಎಂದು ನಾರಾಯಣ ಕಂಪಿಸುತ್ತಿದ್ದ ಧ್ವನಿಯಲ್ಲಿ ಮೆಲ್ಲನೆ ಉತ್ತರಿಸಿದ.

"ನೀನೇನು ಇಲ್ಲಿಯವನಲ್ಲವೇ ? ನಿನಗೆ ದಾರಿ ಗೊತ್ತಿಲ್ಲವೇ ?"

"ಹೂಂ", ಎಂದು ನಾರಾಯಣ ರಾಗವೆಳೆದ.

"ಹಂ. ತಡವಾಯಿತು. ಮತ್ತೆ ಎಲ್ಲ ವಿಚಾರಣೆ. ನಡೆಯಿರಿ. ಹೊಂಡಕ್ಕೆ ಬಿದ್ದ ಆನೆಯನ್ನು ಹೇಗಾದರೂ ಮೇಲೆ ತೆಗೆದವಲ್ಲ!" ಎಂದು ಒಬ್ಬ ಗಟ್ಟಿಯಾಗಿ ಹೇಳಿದ.

ನಾರಾಯಣ ಮೆಲ್ಲನೆ ಬೂಟ್ಸುಗಳನ್ನು ಕಾಲಿಗೆ ಸಿಕ್ಕಿಸಿ ಅವರ

ಹಿಂದೆಯೇ ಹೋಗುತ್ತಿರುವಂತೆ ನಟಿಸಿ, ಅವರು ಮುಂದೆ ಹೋದೊಡನೆ ತನ್ನ ಮನೆಯ ಬಳಿಗೆ ಹೋದ.

ಅಷ್ಟರಲ್ಲಿ ಹಿಂದಿನಿಂದ ದೀಪದೊಡನೆ ಬರುತ್ತಿದ್ದವರೂ ಅವನ ಮನೆಯ ಸಮೀಪವಾದರು. ಅವನು ಫಕ್ಕನೆ ಅಲ್ಲಿದ್ದ ತೆಂಗಿನ ಮರದ ಮರೆಯಲ್ಲಿ ನಿಂತುಕೊಂಡ.

"ಇಷ್ಟು ವೇಗದಲ್ಲಿ ಆ ಮೋಟಾರು ಹೋಯಿತೋ ದೇವರೇ ಬಲ್ಲ. ಲಾರಿಯೋ ಬಸ್ಸೋ ಎಂದು ತಿಳಿಯಲಿಲ್ಲ."

"ಅದು ಲಾರಿಯೆಂದು ತೋರುತ್ತದೆ. ಹಾಗೆಂದು ಅಲ್ಲಿ ಒಬ್ಬ ಮುದುಕ ಹೇಳುತ್ತಿದ್ದ. ಬಸ್ಸಾದರೆ ನಿಲ್ಲದಿರುತ್ತಿತ್ತೆ ?"

"ಯಾರಾದರೂ ಮನುಷ್ಯರಾಗಿರುತ್ತಿದ್ದರೆ ನಿಲ್ಲಿಸುತ್ತಿದ್ದರು !"

"ಏನಪ್ಪ! ಈಗ ಮೋಟಾರುಗಳೆಂದರೆ ಹೀಗೆಯೇ. ಬಿಡುವವರಿಗೆ ಜನರ ಲೆಖ್ಖವೇ ಇಲ್ಲ. ಅವರಂತೂ ಹೇಗಾದರೂ ತಪ್ಪಿಸಿಕೊಂಡೇ ವೆಂಬುದನ್ನು ಮೊದಲೇ ತಿಳಿದಿದ್ದಾರೆ."

"ಅಲ್ಲ ಅಷ್ಟು ನೇರವಾದ ರಸ್ತೆಯದು. ಅದಕ್ಕೆ ತಾಗಿ ಅಡ್ಡ ರಸ್ತೆಯಿದೆ. ಒಂದಿಷ್ಟು ಡೊಂಕು ಕೂಡಾ ಇಲ್ಲ !"

"ಮುದುಕನಿಗೆ ಯಾರೂ ಕೇಳುವವರಿಲ್ಲವೊ ಏನೋ !"

"ಆದರೆ ಏನು ಗಾಯ ! ತಲೆಯೊಡೆದು ಮುಖದ ಗುರುತು ಕೂಡಾ ಸಿಗೋದಿಲ್ಲವಲ್ಲ !"

"ಇನ್ನು ರಸ್ತೆಯಲ್ಲಿ ನಡೆಯುವುದು........"

ಇದು ನಾರಾಯಣನಿಗೆ ಕೇಳಿದ ಅವರ ಕೊನೆಯ ಮಾತು. ಮತ್ತೆ ಮೆಲ್ಲನೆ ಅವನು ಮನೆಯೊಳಗೆ ಹೋದ. ಅವನ ಹೆಂಡತಿ ಬಾಗಿಲು ತೆರೆದಳು.

"ಸ್ವಲ್ಪ ಸ್ನಾನ ಮಾಡಬೇಕಾಗಿದೆ" ಎಂದು ಅವನು ಬಚ್ಚಲು ತೊಟ್ಟಿಗೆ ಹೋದ.

೨

ನಾರಾಯಣ ಬೆಳಗ್ಗೆ ಬಸ್ಸಿನ ನಿಲುಮನೆಗೆ ಹೋಗಿ ಬಸ್ಸಿನೊಳಗೆ ಕುಳಿತುಕೊಂಡ. ಬಸ್ಸಿನ ಕಂಡಕ್ಟರು ಇನ್ನೂ ಬಂದಿರಲಿಲ್ಲ. ನಾರಾಯಣನಿಗೊಮ್ಮೆ ಅದರ ಚಕ್ರಗಳನ್ನೆಲ್ಲ ನೋಡಬೇಕೆಂದಿತ್ತು. ಆದರೆ ಆಗ ಬೆಳಕಿರಲಿಲ್ಲ.

ಅಷ್ಟರಲ್ಲಿ ಕಂಡಕ್ಟರನೂ ಬಂದ. ಅವನ ಹೆಸರು ಮೋನಪ್ಪನೆಂದು. ತಲೆಗೊಂದು ಉಣ್ಣೆಯ ಮಫ್ಲರನ್ನು ಸುತ್ತಿಕೊಂಡಿದ್ದ.

"ಮಳೆಯಿಂದಾಗಿ ಸ್ವಲ್ಪ ತಡವಾಯಿತಣ್ಣಾ. ಹ್ಯಾಂಡ್ಲ್ ಹೊಡೆಯಬೇಕೆ ?" ಎಂದು ಅವನು ನಾರಾಯಣನೊಡನೆ ವಿನಯದಿಂದ ಕೇಳಿದ.

"ಹೌದು ಏನು ಮಳೆ!" ನಾರಾಯಣನೆಂದ." ನಾನೂ ಸಂಪೂರ್ಣ ಒದ್ದೆಯಾಗಿದ್ದೇನೆ. ನನ್ನ ಕೊಡೆ ಎಲ್ಲೋ ಉಳಿದಿದೆ. ಸ್ವಲ್ಪ ಹ್ಯಾಂಡ್ಲ್ ಹೊಡಿ. ಎಣ್ಣೆ ಗಟ್ಟಿಯಾಗಿರಬೇಕು, ಈ ಚಳಿಗೆ. ಬ್ಯಾಟ್ರಿಯೂ ಸ್ವಲ್ಪ ವೀಕ್ ಇದೆ."

ಮೋನಪ್ಪ ಹ್ಯಾಂಡ್ಲನ್ನು ತೆಗೆದುಕೊಂಡು ಬಂದು ಬಸ್ಸಿನ ಎದುರು ಭಾಗದಲ್ಲಿದ್ದ ತೂತನ್ನು ಹುಡುಕಿ ಅದರೊಳಗೆ ತುರುಕಿಸಿದ.

"ಹೊಡೆಯ್ತೇನೆ ಈಗ. ಸ್ವಿಚ್ ಹಾಕಿ."

ಹೀಗೆಂದು ಹ್ಯಾಂಡ್ಲನ್ನು ತಿರುಗಿಸಿದ. ಅದು ಬಲವಾಗಿತ್ತು. ಅದರೊಡನೆ ಮೋಟರಿನ ಎಂಜಿನು ತಿರುಗಬೇಕಿತ್ತು. ಏಳೆಂಟು ಸುತ್ತು ಅವನು ಅದನ್ನು ತಿರುಗಿಸಿದರೂ ಎಂಜಿನು ಇದ್ದ ಹಾಗೆಯೇ ಇತ್ತು.

"ಸ್ವಲ್ಪ ಸೆಲ್ಫ್ ಹೊಡಿಯಿರಣ್ಣಾ" ಎಂದು ಅವನು ಬುಸುಗುಟ್ಟುತ್ತ ನಾರಾಯಣನಿಗೆ ಹೇಳಿದ.

ನಾರಾಯಣ ಕಾಲಡಿಯಲ್ಲಿದ್ದ ಒಂದು ಗುಂಡಿಯನ್ನು ಒತ್ತಿದ. ಎಂಜಿನು 'ಗುಂಯಿ' ಗುಂಯಿ' ಎಂದಿತು.

ಅದರೊಡನೆಯೇ ಮೋನಪ್ಪ ಹ್ಯಾಂಡ್ಲನ್ನೂ ತಿರುಗಿಸಿದ. ಒಮ್ಮೆ ಡಬ್ ಡಬ್ ಎಂದು ಸದ್ದಾಯಿತು. ಎಂಜಿನು ನಿಶ್ಶಬ್ದವಾಯಿತು.

"ಬಹುಶಃ ಪೆಟ್ರೋಲ್ ಬರೋದಿಲ್ಲವೆಂದು ತೋರ್ತ್ತದೆ. ಒಮ್ಮೆ ಆ ಪ್ಲ್ಯಾಪನ್ನು ಸ್ವಲ್ಪ ಊದು ನೋಡುವ. ಇನ್ನೂ ಸೆಲ್ಫ್ ಹೊಡೆದ್ರೆ ಬ್ಯಾಟ್ರಿ ಡೌನ್ ಆದೀತು."

ಮೋನಪ್ಪ ಎಂಜಿನಿನ ಮೇಲಿನ ಬೊನೆಟ್ಟನ್ನು ತೆರೆದ. ಅದರೊಳಗೆ ಏನೂ ಕಾಣುತ್ತಿದ್ದಿಲ್ಲ. ಆದರೆ ಅಲ್ಲಿ ಪೆಟ್ರೋಲ್ ಬರುವ ನಳಿಗೆ ಇರುವ ಜಾಗ ಅವನಿಗೆ ಅಭ್ಯಾಸ ಬಲದಿಂದ ಗೊತ್ತಿತ್ತು. ಸ್ಪ್ಯಾನರ್ ತಂದು ಅದರ ತಿರುಗಣೆಯನ್ನು ತಿರುಗಿಸಿ ತೆಗೆದು ಅದಕ್ಕೆ ಬಾಯಿಯಿಟ್ಟು ಪೆಟ್ರೋಲನ್ನು ಹೀರಿದ. ಒಮ್ಮೆಲೇ ಅವನ ಬಾಯಿಯಿಡೀ ಪೆಟ್ರೋಲು ತುಂಬಿತು.

"ಪೆಟ್ರೋಲ್ ಬಂತಣ್ಣ" ಎಂದು ಅದನ್ನುಗುಳಿ ಮೋನಪ್ಪ ಹೇಳಿದ.

"ಸರಿ. ಬೇಗನೇ ಎರಡುಸಲ ಹ್ಯಾಂಡ್ಲ್ ಹೊಡಿ. ಮತ್ತೂ ಆಗದಿದ್ದರೆ ಸ್ವಲ್ಪ ದೂಡು" ಎಂದು ನಾರಾಯಣ ಪುನಃ ಸ್ವಿಚ್ ಹಾಕಿದ.

ಮೋನಪ್ಪ ತನ್ನ ಇಷ್ಟ ಶಕ್ತಿಯನ್ನೆಲ್ಲ ಉಪಯೋಗಿಸಿ ಆರೇಳು ಸುತ್ತು ಹ್ಯಾಂಡ್ಲ್ ಹೊಡೆದ. ಆದರೆ ಎಂಜಿನು ನಡೆಯಲಿಲ್ಲ.

"ಇನ್ನೊಮ್ಮೆ ಜೋರಾಗಿ ಹೊಡೆ. ಸೆಲ್ಫ್ ಹಾಕುತ್ತೇನೆ."

ಮೋನಪ್ಪ ಹ್ಯಾಂಡ್ಲನ್ನು ಜೋರಾಗಿ ತಿರುಗಿಸಿದ. ಒಂದೆರಡು ಸಲ ಎಂಜಿನು ಡಬ್ ಡಬ್ ಎಂದು ಶಬ್ದ ಮಾಡಿತಲ್ಲದೆ ಅದು ನಡೆಯ ಲಿಲ್ಲ.

ಆಗ ಬೆಳಕಾಗುತ್ತ ಬರುತ್ತಿತ್ತು. ನಾರಾಯಣನಿಗೆ ಒಮ್ಮೆಲೇ ಅವಸರವಾಯಿತು. ಬಸ್ಸನ್ನು ಈಗಲೇ ಕೊಂಡುಹೋಗಬೇಕೆಂದು ಉತ್ಕಟೇಚ್ಛೆಯಾಯಿತು. ಅವನು ಕೆಳಗಿಳಿದು ಬೊನೆಟ್ಟನ್ನು ಎತ್ತಿದ. ನಾಲ್ಕೈದು ಸರಿಗೆಗಳನ್ನು ಮುಟ್ಟಿ ನೋಡಿದ. ಕೆಲವು ತಿರುಗಣೆಗಳನ್ನು ತಿರುಗಿಸಿದ.

"ಕಾರ್ಬೊರೇಟರಿಯಲ್ಲಿ ಕಸ ನಿಂತಿದೆಯೋ ಏನೋ", ಮೋನಪ್ಪ ಕೆಳದ ನಿಯಲ್ಲಿ ಹೇಳಿದ. "ಫಿಟ್ಟರರೂ ಇಲ್ಲಿಲ್ಲ. ಎಂಟು ಗಂಟೆಗೆ ಬರ್ಬೇಕಷ್ಟೆ. ಏನು ಕರ್ಮ! ಅವ್ರು ನೋಡೋದೂ ಇಲ್ಲ."

ನಾರಾಯಣ ಮಾತಾಡಲಿಲ್ಲ. ಅವನ ಉದ್ವೇಗ ಏರುತ್ತಿತ್ತು.

ಹಿಂದೆ ಹೋಗಿ ಗಾಳಿಹಾಕುವ ಪಂಪನ್ನು ತಂದು ಪೆಟ್ರೋಲು ಬರುವ ಕೊಳವೆಗೆ ಜೋಡಿಸಿ ಚೆನ್ನಾಗಿ ಗಾಳಿ ಹೊಡೆದ. ಆಗ ಒಳಗೆ ಏನೋ ಚಿಕ್ಕ ಶಬ್ದವಾಯಿತು. ಕೊಳವೆಯಲ್ಲಿದ್ದ ಕಸ ಹಾರಿ ಹೋಯಿತೆಂದು ಅವನಿಗಾಗ ತಿಳಿಯಿತು. ಕೊಳವೆಯನ್ನು ಪುನಃ ಜೋಡಿಸಿ, ಪಂಪನ್ನು ತಂದು ಒಳಗಿಟ್ಟ.

"ಈಗ ಹ್ಯಾಂಡ್ಲ್ ಹೊಡಿ ನೋಡುವ" ಅವನು ಬಸ್ಸನ್ನೇರಿ ಸ್ವಿಚ್ಚಿನ ಬೀಗದ ಕೈಯ್ಯನ್ನು ತಿರುಗಿಸುತ್ತ ಹೇಳಿದ.

ಮೋನಪ್ಪ ಒಂದೇ ಸಮನೆ ಹ್ಯಾಂಡ್ಲನ್ನು ತಿರುಗಿಸಿದ. ಆಗಲೇ ಅವನ ಅಂಗೈಯಲ್ಲಿ ಒಂದು ಬೊಕ್ಕೆ ಎದ್ದಿತ್ತು.

ಆಗ ನಾರಾಯಣನೇ ಕೆಳಗಿಳಿದು ಅವನಬಳಿ ಬಂದು ಹ್ಯಾಂಡ್ಲನ್ನು ಹಿಡಿದ.

"ನೀನು ಮೇಲೆ ಕುಳಿತುಕೊಂಡು ಎಕ್ಸಲೇಟ್ರನ್ನು ಚೆನ್ನಾಗಿ ಒತ್ತು. ಎಲ್ಲಾದ್ರೂ ಗೇರನ್ನು ಮುಟ್ಬೇಡ. ನ್ಯೂಟ್ರಲಿನಲ್ಲಿಟ್ಟಿದ್ದೇನೆ."

ಮೋನಪ್ಪ ಡ್ರೈವರನ ಸೀಟಿನಲ್ಲಿ ಕುಳಿತುಕೊಂಡು ಸ್ವಿಚ್ಚಿನ ಕೀಲಿಯನ್ನು ತಿರುಗಿಸಿ ಎಕ್ಸಲರೇಟರನ್ನು ಒತ್ತಿದ. ನಾರಾಯಣ ಎದುರಿನಲ್ಲಿ ಒಂದೇ ಸಮನೆ ಹ್ಯಾಂಡ್ಲನ್ನು ತಿರುಗಿಸುತ್ತಿದ್ದ.

ಒಂದೆರಡು ಸಲ ಎಂಜಿನು ಡಬ್ ಡಬ್ ಎಂದು ಶಬ್ದ ಮಾಡಿತು. ಆದರೂ ನಾರಾಯಣ ಹ್ಯಾಂಡ್ಲು ತಿರುಗಿಸುವುದನ್ನು ನಿಲ್ಲಿಸಲಿಲ್ಲ. ಕೊನೆಗೆ ಅವನ ಒತ್ತಾಯಕ್ಕಾಗಿಯೋ ಎಂಬಂತೆ ಎಂಜಿನು ನಡೆಯತೊಡಗಿತು.

"ಎಕ್ಸಲೇಟ್ರನ್ನು ಬಿಡಬೇಡ, ಸರಿಯಾಗಿ ರೇಸ್ ಮಾಡು" ಎನ್ನುತ್ತ ಅವನು ಹ್ಯಾಂಡ್ಲನ್ನು ತೆಗೆದು ಒಳಗೆ ತಂದಿಟ್ಟ.

ಮೋನಪ್ಪನಿಗೆ ಈ ಕೆಲಸ ಯಾವಾಗಲೂ ಸಿಕ್ಕುವುದಿಲ್ಲ. ಅವನಿಗೆ ಒಮ್ಮೆಯಾದರೂ ಬಸ್ಸನ್ನು ನಡೆಸಬೇಕೆಂಬ ಇಚ್ಛೆ ಮೊದಲಿನಿಂದಲೂ ಇತ್ತು. ಆದರೆ ಅವನು ಅದನ್ನು ಯಾರೊಡನೆಯೂ ಹೇಳಿರಲಿಲ್ಲ. ಹೀಗೆ ಒಮ್ಮೆ ಡ್ರೈವರನ ಸೀಟಿನಲ್ಲಿ ಕುಳಿತು ಸ್ವಿಚ್ ಹಾಕಿ ಎಕ್ಸಲರೇಟ

ರನ್ನಾದರೂ ಒತ್ತಿ ಎಂಜಿನನ್ನು ನಡೆಸುವುದೆಂದರೆ ಅವನಿಗೆ ಅತೀ ಉತ್ಸಾಹಕರವಾದ ಕೆಲಸವಾಗಿತ್ತು.

ನಾರಾಯಣ ಬಂದೊಡನೆ ಮೋನಪ್ಪ ಕೆಳಗಿಳಿದ. ಎಂಜಿನು ನಡೆಯುತ್ತಲೇ ಇತ್ತು.

"ಹಿಂದೆ ನೋಡಿಕೋ ಹೋಗುವ" ಎಂದು ನಾರಾಯಣ ಬ್ರೇಕನ್ನು ಮೂಡಿ ಗೀಯರನ್ನು ಸೂಕಿದ. ಅವನು ಕ್ಲಚ್ಚಿನ ಮೇಲಿಪ್ಪ ಕಾಲನ್ನು ಎತ್ತಿದಂತೆಯೇ ಬಸ್ಸು ಹಿಂದೆ ಹೋಗತೊಡಗಿತು.

"ಹಂ ಬರ್‍ಲಿ, ಬರ್‍ಲಿ ಬರ್‍ಲಿ, ರೈಟಿಗೆ ಸ್ವಲ್ಪ ಹೊಡೆಯಿರಿ, ಸ್ಟ್ರೈಟ್ ಹಂ ಬರ್‍ಲಿ, ಬರ್‍ಲಿ ಸಾಕು" ಎನ್ನುತ್ತ ಮೋನಪ್ಪ ಬಸ್ಸಿನ ಹಿಂದೆ ನಿಂತು ಹೇಳುತ್ತಿದ್ದ.

ಬಸ್ಸು ನಿಂತೊಡನೆ ಅವನು ಕೈಯ್ಯಲ್ಲಿದ್ದ ಮರದ ತುಂಡನ್ನು ಬಸ್ಸಿನೊಳಗೆ ಹಾಕಿ ಮೇಲೇರಿದ.

"ಸ್ವಾಬ್ರ ಬಸ್ಸೇನು ಇಲ್ಲಿ ಕಾಣೋದಿಲ್ಲ? ಅವ್ರು ಬರ್‍ಲಿಲ್ವೆ?" ಎಂದು ನಾರಾಯಣ ಮುಂದರಿಯುವಾಗ ಕೇಳಿದ.

"ಅವರ ಬಸ್ಸಿನ ಏಕ್ಸಿಲ್ ತುಂಡಾಗಿದೆಯಂತೆ. ಎಲ್ಲೋ ಸುಳ್ಯದ ಸಮೀಪ ಇದ್ದಾರಂತೆ. ರಾತ್ರೆ ಒಂದು ಲಾರಿಯಲ್ಲಿ ಫಿಟ್ಟರ್ ಹೋಗಿದ್ದಾರೆ."

"ಹುಂ. ಈ ಬಸ್ಸುಗಳು ಯಾರ್‍ಯಾರ ಪ್ರಾಣ ತೆಗೆಯುವವುಗಳು," ನಾರಾಯಣ ತನಗರಿವಿಲ್ಲದೆಯೇ ಹೀಗೆನ್ನುವಾಗ ಫಕ್ಕನೆ ಬೆಚ್ಚಿಬಿದ್ದ.

ಬಸ್ಸು ಸ್ಟ್ಯಾಂಡಿನ ಬಳಿಗೆ ಬಂತು. ಪ್ರಯಾಣಿಕರು ಆಗಲೇ ಅಲ್ಲಿ ನೆರೆದಿದ್ದರು. ಬಸ್ಸು ಬಿಡುವ ಸಮಯವಾಗಿತ್ತಾಗ:

"ಏ ನಾರಾಯಣ! ಏನೋ ನಿನ್ನ ಬಸ್ಸು ಯಾವಾಗಲೂ ತಡವಾಗಿರುತ್ತದಲ್ಲ! ಇಲ್ಲಿ ಜನರು ಯಾವಾಗಲೋ ಬಂದಿದ್ದಾರೆ." ಎಂದು ಟಿಕೇಟು ಕೊಡುವ ಏಜೆಂಟರು ಹೇಳಿದರು.

"ಏನು ಮಾಡೋದು ಸ್ವಾಮಿ! ಬಸ್ಸು ಸ್ಟಾರ್ಟಾಗ್ಬೇಕಲ್ಲ? ಹ್ಯಾಂಡ್ಲ್ ಹೊಡ್ದು ಕೈ ನೋಯ್ತುದೆ." ಎಂದು ಮೋನಪ್ಪ ಹೇಳಿದ.

ಪ್ರಯಾಣಿಕರು ಒಮ್ಮೆಲೇ ಬಸ್ಸನ್ನೇರಿದರು.

ನಾರಾಯಣ ಮೋನಪ್ಪನನ್ನು ಕರೆದುಕೊಂಡು ಕಾಫಿ ಹೋಟೇಲಿಗೆ ಹೋದ. ಅಲ್ಲಿ ಇಬ್ಬರೂ ಅವಲಕ್ಕಿ ಮತ್ತು ಸಜ್ಜಿಗೆಯ ಉಪ್ಪಿಟ್ಟನ್ನು ತಿಂದು ಕಾಫಿ ಕುಡಿದು ಬೀಡಿ ಸೇದುತ್ತ ಹಿಂದೆ ಬಂದರು.

ಪ್ರಯಾಣಿಕರು ಟಿಕೇಟು ಮಾರುವ ಏಜೆಂಟರೊಡನೆ ಆಗಲೇ ಗೊಣಗುಟ್ಟುತ್ತ ಜಗಳ ಮಾಡಲಾರಂಭಿಸಿದ್ದರು.

"ಆ ಡ್ರೈವರನೇನು ಸತ್ತು ಹೋದನೆ?" ಎಂದೊಬ್ಬ ಕೇಳುತ್ತಿದ್ದರು.

"ಗಂಟೆ ಆರೂಕಾಲಾಯಿತು. ಐಮೂವರೆಗೆ ಬಿಡುವ ಬಸ್ಸಿದು!" ಎಂದು ಇನ್ನೊಬ್ಬರು ಹೇಳುತ್ತಿದ್ದರು.

"ಎಲ್ಲ ಹೀಗೆಯೇ! ಇವರನ್ನು ಯಾರು ಕೇಳುವವರಿಲ್ಲ. ಹೋಗಬೇಕಾದವರು ಬಸ್ಸು ಬಿಡುವ ತನಕ ಕಾದು ನಿಲ್ಲುತ್ತಾರೆ."

"ಮತ್ತೆ ಸಮಯದ ನಿಯಮವೇಕೆ? ಅವರಿಗೆ ಖುಶಿ ಬಂದಾಗ ಬಸ್ಸನ್ನು ಬಿಡಬಹುದಲ್ಲ? ಇಷ್ಟೆಲ್ಲ ಬೋರ್ಡುಗಳನ್ನಿಡುವ ಅವಶ್ಯವಾದರೂ ಹಾಗೆ ಮಾಡಿದರೆ ಇರಲಿಕ್ಕಿಲ್ಲ!"

"ಅದೆಲ್ಲ ಕೇಳ್ಬೇಡಿ ಸ್ವಾಮಿ? ಇಲ್ಲಿ ಬಸ್ಸ್ ಸ್ಟ್ಯಾಂಡಿನಲ್ಲಿ ಪ್ರತ್ಯೇಕ ನ್ಯಾಯವಿದೆ. ಇಲ್ಲಿ ಯಾರು ಏನು ಹೇಳಿದ್ರೂ ಅದ್ಕೆ ನಾವು ಮಾತಾಡ್ಬಾರದು. ಮಾತಾಡಿದ್ರೆ ನಾವು ಸೋತಂತೆಯೇ!"

"ನೋಡಿ ಈಗ ಬರ್ತದೆ ಡ್ರೈವರನ ಸವಾರಿ. ಎಷ್ಟು ಮೆಲ್ಲಗೆ ನಡೆಯುತ್ತಿದ್ದಾನೆ, ನೋಡಿ."

ನಾರಾಯಣನಿಗೂ ಕೊನೆಗೆ ಹೇಳಿದ್ದು ಇದು ಕೇಳಿತು. ಆದರೆ ಅವನು ಮಾತಾಡದೆ ತನ್ನ ಸ್ಥಳದಲ್ಲಿ ಕುಳಿತುಕೊಂಡ.

ಮೋನಪ್ಪ ಅಷ್ಟರಲ್ಲಿ "ರೈಟ್" ಎಂದ.

ಸುಮಾರು ಎರಡು ಮೈಲು ಹೋಗುವಾಗ ಪೋಲೀಸಿನವನೊಬ್ಬ ಅದನ್ನು ನಿಲ್ಲಿಸಿ, ನಾರಾಯಣನ ಬಸ್ಸು ನಡಸುವ ಲೈಸನ್ಸು ಮತ್ತು ಬ್ಯಾಜುಗಳನ್ನು ತನಿಖೆ ಮಾಡಿದ. ನಾರಾಯಣ ಬ್ಯಾಜನ್ನು ಬಹಳ ಹುಡುಕಿದ. ಆದರೆ ಅದು ಸಿಗಲಿಲ್ಲ. ಕೊನೆಗೆ ತಾನು ರಾತ್ರೆ

ಅಂಗಿಯನ್ನು ಬದಲಿಸಿ ಹಾಕುವಾಗ ಅವರಲ್ಲೇ ಅದನ್ನು ಬಿಟ್ಟರ ಬೇಕೆಂದು ನೆನೆದ.

"ಇದೇನು, ಈ ಲೈಸನ್ಸು ಪುಸ್ತಕವಲ್ಲಿ ಮಣ್ಣಾಗಿದೆ?" ಎಂದು ಪೋಲೀಸಿನವ ಗದರಿಸಿದ.

"ಅದು ನಿನ್ನೆ ಅಂಗಿಯಿಂದ ಕೆಳಗೆ ಬಿದ್ದು ಹೋಯ್ತು ಸ್ವಾಮಿ. ಅದರೊಡನೆ ಬ್ಯಾಜೂ ಇತ್ತು. ಅದು ಇವತ್ತು ಬೆಳಿಗ್ಗೆ ನಾನು ಹೊರ ಡುವ ಅವಸರದಲ್ಲಿ ಮನೆಯಲ್ಲೇ ಉಳಿಯಿತು."

ಪೋಲೀಸಿನವ ನಾರಾಯಣನನ್ನೇ ಕ್ಷಣಕಾಲ ನೋಡಿದ. ನಾರಾ ಯಣನಿಗೆ ಹೆದರಿಕೆಯಾಯಿತು. ತಾನು ಎಷ್ಟೋ ವರ್ಷದಿಂದ ಬಸ್ಸನ್ನು ನಡೆಸುತ್ತಿರುವುದನ್ನು ಈ ಪೋಲೀಸಿನವನು ಕಂಡಿದ್ದಾನೆ. ಈಗ ತನ್ನೊಡನೆ ಬ್ಯಾಜು ಇಲ್ಲದ್ದಕ್ಕೆ ಅವನು ಬಂದು ಚಿಕ್ಕ ಮೊಕದ್ದಮೆ ಹೂಡಿ ಸ್ವಲ್ಪ ಜುಲುಮಾನೆಯಾಗುವಂತೆ ಮಾಡಬಹುದಷ್ಟೆ. ಅದ ಕ್ಕಾಗಿ ಅವನು ತನ್ನನ್ನು ಇಷ್ಟು ಪರೀಕ್ಷಿಸಬೇಕಾದ ಅವಶ್ಯವಿಲ್ಲ. ಹೀಗೆಂದು ನಾರಾಯಣ ಯೋಚಿಸುತ್ತಿರುವಾಗ ಪೋಲೀಸಿನವ ಬಸ್ಸಿನ ಸುತ್ತಲೂ ಸೂಕ್ಷ್ಮವಾಗಿ ನೋಡುತ್ತ ಮೆಲ್ಲನೆ ಮೋನಪ್ಪನ ಬಳಿಗೆ ಹೋದ ಮೋನಪ್ಪ ತನ್ನ ಲೈಸನ್ಸನ್ನು ತೆಗೆದು ತೋರಿಸಿದ.

"ನಿನ್ನ ಟೊಪ್ಪಿ ಎಲ್ಲಿದೆ?" ಎಂದು ಅವನಿಗೆ ಪೋಲೀಸಿನವ ಗದರಿಸಿ ಕೇಳಿದ.

"ಬಸ್ಸಿನ ಒಳಗಿದೆ" ಎಂದ ಮೋನಪ್ಪ.

"ನಿನಗದು ಒಳಗಿಡಲಿಕ್ಕೆ ಇದ್ದುದೇ?....ನೋಡುವ ಅದನ್ನು ತಲೆಯ ಮೇಲಿಟ್ಟುಕೊಳ್ಳು."

ಮೋನಪ್ಪ ಸುಮ್ಮನೆ ಬಸ್ಸಿನೊಳಗೆ ಟೊಪ್ಪಿಯನ್ನು ಹುಡುಕಿದ. ಅದು ಹಿಂದಿನ ದಿನ ಒದ್ದೆಯಾದುದರಿಂದ ಮನೆಯಲ್ಲೇ ಅದನ್ನು ಒಣಗ ಲಿಕ್ಕೆ ಹಾಕಿದುದು ಅವನಿಗೆ ನೆನಪಿತ್ತು.

"ಏನು? ಸಿಗಲಿಲ್ಲವೆ?" ಎಂದು ಪೋಲೀಸಿನವ ಕೇಳಿದ. "ಇಲ್ಲ ಸ್ವಾಮಿ" ಮೋನಪ್ಪ ಕೈ ಜೋಡಿಸಿ ಹೇಳಿದ. "ಬಸ್ಸು ಬಿಡುವಾಗ ಇತ್ತು. ಈಗ ಎಲ್ಲೋ ಬಿದ್ದು ಹೋಯಿತೋ ಏನೋ!"

"ಹ್ಞ! ನಿನ್ನ ಸುಳ್ಳೇ!"

ಮೋನಪ್ಪನಿಗೆ ಆ ಪೋಲೀಸಿನವನ ಸ್ವಭಾವ ಚೆನ್ನಾಗಿ ತಿಳಿದಿತ್ತು. ಆವನು ಕಿಸೆಯಿಂದ ಎಂಟಾಣೆಯ ಪಾವಲಿಯನ್ನು ತೆಗೆದು ಮೆಲ್ಲನೆ ಪೋಲೀಸಿನವನ ಕೈಗಿತ್ತ.

"ಹುಂ. ಇನ್ನು ಮುಂದೆ ಟ್ರಿಪ್ಪಿ ತರವಿಪ್ಪರೆ ಜಾಗ್ರತೆ!" ಎಂದು ಅವನು ಕಣ್ಣಾರಳಿಸಿ ಹೇಳಿದ.

ನಾರಾಯಣನ ಎದೆ ನಡುಗುತ್ತಿತ್ತು. ಪೋಲೀಸಿನವನು ತನ್ನನ್ನು ನೋಡಿದ ರೀತಿಯಲ್ಲೇ ಅವನಿಗೆ ಸಂಶಯವಾಗಿತ್ತು. ಮತ್ತೆ ಅವನು ಬಸ್ಸನ್ನು ಸೂಕ್ಷ್ಮವಾಗಿ ಪರಿಶೀಲಿಸುತ್ತಿದ್ದುದನ್ನು ಕಂಡಂತೂ ಅವನ ಸಂಶಯ ಬಲವಾಗಿತ್ತು. ಮಡ್‌ಗಾರ್ಡ್, ಚಕ್ರ, ಬಂಪರ್, ರೇಡಿಯೇಟರ್ ಇತ್ಯಾದಿ ಬಸ್ಸಿನ ಎಲ್ಲ ಭಾಗಗಳನ್ನೂ ಪೋಲೀಸಿನವ ಓರೆ ಕಣ್ಣಿನಿಂದಲೇ ನೋಡಿದ್ದ. ಕಂಡಕ್ಟರನ ವಿಚಾರಣೆಯಾದೊಡನೆ ಅವನು ಪುನಃ ತನ್ನನ್ನು ತನಿಖೆ ಮಾಡಲು ಬಾರದಿರಲಿಕ್ಕಿಲ್ಲವೆಂದು ಅವನು ತಲ್ಲಣಿಸುತ್ತ ನಿರೀಕ್ಷಿಸಿದ.

ಮತ್ತೆ ಮೋನಪ್ಪ 'ರೈಟ್' ಎಂದಾಗ ನಾರಾಯಣನಿಗೆ ಜೀವ ಬಂದಂತಾಗಿತ್ತು.

ಬಸ್ಸು ಮುಂದರಿಯಿತು. ನಾರಾಯಣನ ಕಣ್ಣುಗಳು ಉರಿಯುತ್ತಿದ್ದುವು. ಹಿಂದಿನ ರಾತ್ರಿ ಅವನಿಗೆ ನಿದ್ದೆ ಬಂದಿರಲಿಲ್ಲ. ಅಲ್ಲದೆ ಕಾಲಿನಲ್ಲಿದ್ದ ಮುಳ್ಳುಗಳು ಆಗಾಗ ಅವನಿಗೆ ನೋವನ್ನುಂಟುಮಾಡುತ್ತಿದ್ದುವು ಅವನು ವೇಗವನ್ನು ಹೆಚ್ಚಿಸಲು ಹೆದರುತ್ತಿದ್ದ. ಸ್ಟೀಯರಿಂಗ್ ಚಕ್ರ ಕೈಯಲ್ಲಿ ನಡುಗುತ್ತಿತ್ತು. ರಸ್ತೆಯ ಬದಿಯಲ್ಲಿ ಹೋಗುತ್ತಿದ್ದವರನ್ನು. ಕಂಡರೆ ಕೂಡ ಅವನು ವೇಗವನ್ನು ಇನ್ನೂ ಕಡಿಮೆಮಾಡಿ ಹಾರ್ನು ಬಾರಿಸುತ್ತಿದ್ದ. ಒಂದೆರಡು ಕಡೆ ಎದುರಿನಿಂದ ಮೋಟಾರುಗಳು ಬರುತ್ತಿರುವುದನ್ನು ನೋಡಿ ಅವನು ದೂರದಲ್ಲೇ ತನ್ನ ಬಸ್ಸನ್ನು ನಿಲ್ಲಿಸಿ ಅದಕ್ಕೆ ದಾರಿ ಮಾಡಿಕೊಟ್ಟಿದ್ದ. ಹಿಂದಿನಿಂದ ಬರುತ್ತಿದ್ದ ಲಾರಿಗಳಿಗೆ ಕೂಡಾ ಅವನು ಮುಂದೆ ಹೋಗಲು ಕೈಯಲ್ಲಿ ಸಂಜ್ಞೆ ಮಾಡುತ್ತಿದ್ದ. ಅಂದು ಅವನು ಎಂದಿನಂತೆ ಕೈಕಾಲು ಚಾಚಿ, ಸಾವಕಾಶವಾಗಿ ಕುಳಿತು

ಕೊಂಡಿರಲಿಲ್ಲ. ಸ್ಟೀಯರಿಂಗ್ ಚಕ್ರವನ್ನು ಅವನು ಅಪ್ಪಿ ಹಿಡಿದಿದ್ದಾನೋ ಎಂದು ತೋರುತ್ತಿತ್ತು. ಹಾಗೆಯೇ ಕಾಲೂ ಆಗಾಗ ಅವನಿಗೆ ತಿಳಿಯದಂತೆ ಬ್ರೇಕ್ ಪೆಡಲಿನ ಮೇಲೆ ಬರುತ್ತಿತ್ತು. ಕಣ್ಣಿನ ದೃಷ್ಟಿ ತುಸು ಮಂದವಾಗಿ ಹೋದಂತೆ ಅವನಿಗೆ ಭಾಸವಾಯಿತು. ಒಂದೆರಡು ಫರ್ಲಾಂಗುಗಳಷ್ಟು ದೂರ ನೋಡಬಲ್ಲ ಅವನಿಗೆ ಈಗ ಮೋಟರಿನ ಚಕ್ರದಿಂದ ಮುಂದೆ ತುಸು ದೂರದಲ್ಲಿ ಏನಾದರೂ ಬಂದರೆ ಅದು ಸ್ಪಷ್ಟವಾಗಿ ತೋರುತ್ತಿರಲಿಲ್ಲ. ಕೆಲವೆಡೆ ರಸ್ತೆಯನ್ನು ಹಾದು ಹೋಗುತ್ತಿರುವವರಿಗಾಗಿ ಬಸ್ಸನ್ನೇ ನಿಲ್ಲಿಸಿ ಅವರು ಹೋಗುವತನಕ ಕಾದ. ರಸ್ತೆಯಲ್ಲಿ ಒಂದು ನಾಯಿ, ಒಂದು ಆಡಿನ ಮರಿ, ಒಂದು ದನ ಎಲ್ಲಾದರೂ ಕಾಣಸಿಕ್ಕಿದರೆ ಕೂಡಲೇ ಅವನ ಕಾಲು ಬ್ರೇಕಿನ ಮೇಲೆ ಹೋಗುತ್ತಿತ್ತು. ಸರ್ಕಾರವೇನೋ ಗಂಟೆಯೊಂದಕ್ಕೆ ಇಪ್ಪತ್ತೈದು ಮೈಲುಗಳಿಗಿಂತ ಹೆಚ್ಚು ವೇಗದಲ್ಲಿ ಯಾವ ಬಸ್ಸೂ ಹೋಗ ಬಾರದೆಂದು ವಿಧಿಸಿತ್ತು. ಆದರೆ ಇಂದು ನಾರಾಯಣನ ಬಸ್ಸಿನ ವೇಗ ಅದಕ್ಕಿಂತಲೂ ಕಡಿಮೆಯಾಗಿತ್ತು. ಅಷ್ಟು ಮೆಲ್ಲಗೆ ಹೋಗುವಾಗಲೂ ಒಂದು ಕಡೆ ಅವನು ಒಂದು ಸೇತುವೆಯ ಗೋಡೆಗೆ ಬಸ್ಸನ್ನು ಡಿಕ್ಕಿ ಹೊಡೆಯುವನೆಂದು ಜನರಿಗೆ ಹೆದರಿಕೆಯಾಯಿತು. ಹೇಗೋ ಫಕ್ಕನೆ ಅಲ್ಲಿ ಸ್ಟೀಯರಿಂಗ್ ಚಕ್ರವನ್ನು ತಿರುಗಿಸಿ ಬಸ್ಸನ್ನು ರಸ್ತೆಯ ಮಧ್ಯಕ್ಕೆ ತಿರುಗಿಸಿದ. ಮತ್ತೊಂದೆಡೆ ಒಂದು ಆಡಿನ ಮರಿಯನ್ನು ಬಸ್ಸಿನ ದಾರಿಯಿಂದ ತಪ್ಪಿಸಲಿಕ್ಕಾಗಿ ಅವನು ತಿರುಗಿಸಿದಾಗ ಬಸ್ಸಿನ ಮತ್ತೊಂದು ಬದಿಯ ಚಕ್ರ ರಸ್ತೆಯ ಬದಿಯಲ್ಲಿದ್ದ ಕಲ್ಲಿನ ರಾಶಿಯಮೇಲೆ ಏರಿ ಹೋಯಿತು. ಆಗ ಬಸ್ಸು ಜೋರಾಗಿ ಅಲುಗಾಡಿತು. ಕೆಲವರ ತಲೆ, ಕೈ, ಮೊಣಕಾಲುಗಳಿಗೆ ತುಸು ನೋವೂ ಆಯಿತು. ಅಲ್ಲಿಂದ ಮುಂದುವರಿದು ಹೋಗುವಾಗ ಒಂದೆಡೆ ತಿರುಗುವಲ್ಲಿ ಎದುರಿನಿಂದ ಸದ್ದಿಲ್ಲದೆ ಬರುತ್ತಿದ್ದ ಕಾರಿಗೆ ಬಸ್ಸು ಢಿಕ್ಕಿ ಹೊಡೆಯಿತೆಂಬೇ ಆಯಿತು. ಹೇಗೋ ಕಾರಿನವ ಅದನ್ನು ನಿಲ್ಲಿಸಿದ. ನಾರಾಯಣನೂ ಒಮ್ಮೆಲೇ ಬ್ರೇಕ್ ಹಾಕಿದ. ಬಸ್ಸಿನಲ್ಲಿ ಕುಳಿತಿದ್ದವರ ಒಬ್ಬರ ತಲೆಗೆ ಇನ್ನೊಬ್ಬರ ತಲೆ ತಾಗಿತು.

"ಎಂಥ ಬ್ರೇಕ್ ಇದಪ್ಪಾ!" ಎಂದು ಒಳಗೆ ಕೆಲವರು ಹೇಳುತ್ತಿದ್ದರು. ಕಾರು ಹಾದು ಹೋಯಿತು. ನಾರಾಯಣ ಬಸ್ಸನ್ನು ಮುಂದೆ ನಡೆಸಿದ.

"ಈ ಕಾರುಗಳು ಯಾರ್ಯಾರ ಜೀವ ತೆಗೆಯುತ್ತಿವೆ ಸ್ವಾಮಿ!" ಅವನು ತನ್ನ ಬದಿಯಲ್ಲಿದ್ದವರಿಗೆ ಹೇಳಿದ. "ಪ್ರಾಯಕ್ಕೆ ಬಾರದ ದನ ಮೇಯಿಸುವ ಹುಡುಗ್ರು ಸಹಾ ಈಗ ಮೋಟರ್ ನಡ್ಸುವವ್ರೇ ಆಗಿದ್ದಾರೆ ಸ್ವಾಮಿ! ಸ್ಟೇರಿಂಗು, ಎಕ್ಸಲೇಟರ್, ಬ್ರೇಕ್, ಗೇರ್ ಮತ್ತು ಹಾರ್ನುಗಳಲ್ಲದೆ ಅವರಿಗೆ ಬೇರೇನೂ ಗೊತ್ತಿಲ್ಲ. ಸ್ಟೇರಿಂಗ್ ಹಿಡಿದೊಡನೆ ಅವರ ಕಣ್ಣು ಕೆಂಪಾಗುತ್ತದೆ. ಮತ್ತೆ ಒಂದೇ ಸಮನೆ ಎಕ್ಸಲೇಟರ್ ಕೊಡ್ತಾರೆ. ಕಾರು ಏನಾದ್ರೇನು, ಜನ್ರು ಏನಾದ್ರೇನು ಅವ್ರಿಗೆ? ಎಲ್ಲಿ ಬೇಕಾದ್ರೂ ಸರ್ವಿಸ್ ಮಾಡಿಸ್ಲಿಕ್ಕೆ ನೀವೂ ಹೋಗಿ, ಅಲ್ಲೆಲ್ಲಾ ಕಾರುಗಳು ರಿಪೇರಿಗೆ ಕ್ಯೂ ನಿಂತಿವೆ! ಕಲವ್ರಿಗೆ ಸರ್ವಿಸ್ನ ಚಾರ್ಜನ್ನು ಕೊಡ್ಲಿಕ್ಕೆ ಕೂಡ ಹಣವಿಲ್ಲ! ಇದು ನಮ್ಗೆ ಮಾತ್ರ ಪ್ರಾಣಕ್ಕೆ ಸಂಚಕಾರವಾಗುತ್ತದೆ, ಅಷ್ಟೆ."

"ಈಗ ಪೆಟ್ರೋಲೂ ಬೇಕಾದಷ್ಟು ಸಿಗ್ತದಲ್ಲ?" ಎಂದು ಅವರು ನಸುನಕ್ಕರು.

"ಪೆಟ್ರೋಲೆ? ಹಂ. ಈ ಕಾರಿನವರಿಗೆ ಪೆಟ್ರೋಲಿಗೇನೂ ಕಡಿಮೆಯಿಲ್ಲ. ಗ್ಯಾಲನಿಗೆ ಇಪ್ಪತ್ತು ಇಪ್ಪತ್ತೈದು ರೂಪಾಯಿಗಳನ್ನು ಕೊಟ್ಟು ಕಾರನ್ನು ನಡೆಸುತ್ತಿದ್ದವರನ್ನು ನಾನು ಬಲ್ಲೆ. ಈಗಲಂತೂ ಮೂಲೆಯಲ್ಲಿ ತುಕ್ಕುಹಿಡಿಯುತ್ತಿದ್ದ ಕಾರು ಕೂಡಾ ರಸ್ತೆಗಿಳಿದಿದೆ."

"ಈಗ ಎಷ್ಟು ಎಕ್ಸಿಡೆಂಟುಗಳಾಗುತ್ತಿವೆ!" ಹಿಂದಿನಿಂದ ಕುಳಿತವರೊಬ್ಬರು ಹೇಳಿದರು. "ನಿನ್ನೆ ಸಂಜೆಗೊಂದು ಮಂಗ್ಳೂರಲ್ಲಿ ನಡೆಯಿತು, ರಾಮ ರಾಮಾ, ಅದನ್ನು ಹೇಳಲಿಕ್ಕೆ ನನಗೆ ಸಾಧ್ಯವಾಗುವುದಿಲ್ಲ. ಒಬ್ಬ ಅಜ್ಜಯ್ಯ ನಾವು ಆಚೆ ಉರ್ವಕ್ಕೆ ತಿರುಗುವಲ್ಲಿ ಖಲಾಸ್ ಆದನೆಂದು ತೋರುತ್ತದೆ. ನನಗೆ ಅದನ್ನು ನೋಡಲಿಕ್ಕಾಗಲಿಲ್ಲ. ಅಷ್ಟು ರಕ್ತ ಹರಿಯುತ್ತಿತ್ತು! ಕಾರಿನವ ಓಡಿಯೇ ಹೋದ."

ನಾರಾಯಣನಿಗೆ ಮೈ ಜುಮ್ಮೆಂದಿತು.

"ಅಜ್ಜಯ್ಯನೇ ?" ಮತ್ತೊಬ್ಬ ಕೇಳಿದ. "ಒಂದು ಮಗುವೆಂದು ಯಾರೋ ಹೇಳಿದರು! ಲಾರಿ ಅದರ ಮೇಲೆ ಹೋಯಿತಂತೆ, ಲಾರಿ ಯವನನ್ನು ರಿಮಾಂಡಿನಲ್ಲಿಟ್ಟಿದ್ದಾರಂತೆ."

"ಲಾರಿಯವನೇ? ನಾನು ಒಬ್ಬ ಮುದುಕಿಯ ಮೇಲೆ ಹಾದು ಹೋದ ಸಿಟಿ ಬಸ್ಸನ್ನು ಕೂಡಾ ನೋಡಿದೆ! ಡ್ರೈವರ ಬಸ್ಸನ್ನು ನಿಲ್ಲಿಸಲೇ ಇಲ್ಲ! ಏನು ವೇಗದಲ್ಲಿ ಹೋದ!"

"ಬಸ್ಸಾದರೆ ವೇಗದಲ್ಲಿ ಹೋಗಿಯಾದರೂ ಏನು ಪ್ರಯೋಜನ? ಅದರಲ್ಲಿ ಜನರಿರುವರಲ್ಲ!"

ನಾರಾಯಣ ಈ ಸಂಭಾಷಣೆಯನ್ನು ಕೇಳಿ ಏನನ್ನು ಹೇಳಲಿಲ್ಲ. ಅವನ ಮುಖ ಮಾತ್ರ ಆಗ ಕಪ್ಪಾಗಿತ್ತು. ಅದೂ ಆ ಸುದ್ದಿಯ ವೈವಿಧ್ಯವನ್ನು ಕೇಳಿ ಅವನಿಗೆ ತುಸು ನಗು ಕೂಡಾ ಬಂತು. ಒಬ್ಬ ಕಾರೆಂದ. ಒಬ್ಬ ಲಾರಿ ಎಂದ. ಇನ್ನೊಬ್ಬ ಸಿಟಿ ಬಸ್ಸೆಂದ. ಮತ್ತೊಬ್ಬ ಮೋಟರ್ ಸೈಕಲೆಂದು ಹೇಳಲೂ ಬಹುದೆಂದು ನಿರೀಕ್ಷಿಸಿದ. ಹಾಗೆಯೇ ಗಾಯ ಗೊಂಡ ವ್ಯಕ್ತಿಯ ವರ್ಣನೆಯಲ್ಲೂ ತುಂಬಾ ವೈವಿಧ್ಯವಿತ್ತು. ಇವನ್ನೆಲ್ಲ ಯೋಚಿಸುವಾಗ ಅವನಿಗೆ ಅವರು ಯಾರೂ ಸತ್ಯವನ್ನು ಹೇಳುತ್ತಿಲ್ಲವೆಂಬುದು ಸ್ಪಷ್ಟವಾಯಿತು.

ಆದರೆ ಸುದ್ದಿಗಳೆಲ್ಲ ಹೀಗೆಯೇ ಎಂದು ಅವನು ನೆನೆಸಿದ. ಒಬ್ಬನು ಒಂದನ್ನು ಹೇಳಿದರೆ, ಇನ್ನೊಬ್ಬ ಅದನ್ನು ತಿರುಗಿಸಿ ಹೇಳುವ. ಮತ್ತೊಬ್ಬ ಅದನ್ನು ಮತ್ತು ಬದಲಿಸುವ. ಇದು ಕೇವಲ ಕೆಲವು ದಿನಗಳ ಮಟ್ಟಿಗೆ ಮಾತ್ರ. ಮತ್ತೆ ಪುನಃ ಎಲ್ಲರಿಗೂ ನಿಜಸುದ್ದಿ ತಿಳಿಯುವುದು.

ಆಗ ಪೋಲಿಸ್ ಠಾಣೆಯೊಂದು ಬಂತು. ನಾರಾಯಣ ಬಸ್ಸನ್ನು ನಿಲ್ಲಿಸಿ ಅದರಿಂ ಕೆಳಗಿಳಿದ. ಮೋನಪ್ಪ ಪೋಲೀಸ್ ಠಾಣೆಗೆ ದಸ್ಕತ್ತು ಕೊಡಲು ಹೋದ. ನಾರಾಯಣ ಒಂದು ಬೀಡಿಯನ್ನು ಹೊತಿಸಿ ಅತ್ತಿತ್ತ ತಿರುಗಾಡಿದ. ಕಾಫಿ ಕುಡಿಯಲಿಕ್ಕೂ ಅವನಿಗೆ ಮನಸ್ಸಿರಲಿಲ್ಲ. ಆ ಮೇಲೆ ವಾಡಿಕೆಯಂತೆ ಬಸ್ಸಿನ ಮುಂದೆ ಕುಳಿತು ಕೊಂಡು ಅದರ ಚಕ್ರದ ಕೀಲುಗಳನ್ನೆಲ್ಲ ಸ್ವಲ್ಪ ಸ್ವಲ್ಪ ಪರಿಶೀಲಿಸಿದ.

ಎಡಭಾಗದ ಚಕ್ರವನ್ನು ನೋಡಿ ಎದ್ದು ನಿಲ್ಲುವಾಗ ಅದರ

ಬದಿಯಲ್ಲಿ ಅಂಟಿದ್ದ ಕೆಂಪುಬಣ್ಣ ಗೋಚರಿಸಿತು. ಗಾಬರಿಯಿಂದ ಅದನ್ನು ಪರೀಕ್ಷಿಸಿದ. ಅದರಲ್ಲಲ್ಲದೆ ಮೇಲಿನ ಬಂಪರ್‌ನಲ್ಲಿಯೂ, ಮಡ್‌ಗಾರ್ಡಿನಲ್ಲಿಯೂ ರಕ್ತ ವರ್ಣದ ಬೊಟ್ಟುಗಳಿದ್ದುವು. ಅವನು ಅವನ್ನು ಉಗುರಿನಿಂದ ಕೆರೆದ.

ಮೋನಪ್ಪ ಹಿಂದೆ ಬರುವಾಗ ಅವನೊಡನೆ ಒಬ್ಬ ಪೋಲೀಸ್ ಅಧಿಕಾರಿಯೂ ಬಂದು ಬಸ್ಸಿನಲ್ಲಿ ನಾರಾಯಣನ ಬಳಿಯಲ್ಲೇ ಕುಳಿತುಕೊಂಡರು. ಪೋಲೀಸರು ಯಾವಾಗಲೂ ಮೋಟರಿನವರಿಗೆ ಒಡೆಯರಂತಿದ್ದರೂ ಆಗ ನಾರಾಯಣನಿಗೆ ಆದ ಹೆದರಿಕೆ ಅಷ್ಟಿಷ್ಟಲ್ಲ. ಅಧಿಕಾರಿಯು ತನ್ನನ್ನೇ ನೋಡುತ್ತಿರುವಂತೆ ಅವನಿಗೆ ಭಾಸವಾಯಿತು. ತನ್ನ ಚಲನ ವಲನಗಳನ್ನೆಲ್ಲ ಅವರು ತಮ್ಮ ಕರ್‍ರಗಿನ ಕನ್ನಡಕದ ಮೂಲಕ ಪರಿಶೀಲಿಸುತ್ತಿದ್ದಾರೆಂದು ಅವನು ಭ್ರಮೆಪಟ್ಟ. ಹೇಗೋ ಬಸ್ಸನ್ನು ಮುಂದೆ ನಡೆಸಿದ.

ಬಸ್ಸಿನ ಎದುರಲ್ಲಿ ಹಿಡಿದಿದ್ದ ರಕ್ತದ ಬೊಟ್ಟುಗಳನ್ನು ಮಂಗಳೂರಲ್ಲಿ ನೋಡಸಿಕ್ಕಿದ ಪೋಲೀಸಿನವನೇ ಗಮನಿಸಿರಲೂ ಸಾಕೆಂದು ನಾರಾಯಣನಿಗೆ ಸಂಶಯವಾಯಿತು. ಅವನು ಆ ಒಳಗೆ ಈ ಅಧಿಕಾರಿಗೆ ತಂತಿ ಕಳಿಸಿರಲೂ ಬಹುದು. ಹೀಗೆ ಸಂಯೋಜನೆಯಿಂದ ಪೋಲೀಸರೆಲ್ಲರೂ ತನ್ನನ್ನು ಪರೀಕ್ಷಿಸುತ್ತಿರಬಹುದು. ಅವರು ಪತ್ತೆಹಚ್ಚುವ ಕಲೆಯಲ್ಲಿ ವಿಶಾರದರು. ಎಂತೆಂಥ ಗೋಪ್ಯವಾದ ವಿದ್ಯಮಾನಗಳನ್ನು ಸಂಶೋಧಿಸಿ ಬಯಲಿಗೆಳೆಯುವವರು. ಇಷ್ಟನ್ನು ತಿಳಿದೂ ತಾನು ಕೆಲಸಕ್ಕೆ ಇಂದು ಬಂದೆನಲ್ಲ! ಸುಮ್ಮನೆ ಜ್ವರ ಬರುತ್ತಿದೆಯೆಂದು ಮನೆಯಲ್ಲೇ ಉಳಕೊಳ್ಳಬಹುದಿತ್ತು. ಇಲ್ಲವಾದರೆ ಬಸ್ಸು ಹಾಳಾಗಿದೆಯೆಂದು ಗ್ಯಾರೇಜಿನಲ್ಲೇ ಕೆಲಸ ಮಾಡುತ್ತ ಇರಬಹುದಿತ್ತು. ಸುಮ್ಮನೆ ಇಂದು ಎಂದಿನಂತೆ ಕೆಲಸಕ್ಕೆ ಬಂದು ಈ ಪೋಲೀಸರ ಸೂಕ್ಷ್ಮದೃಷ್ಟಿಯ ಬಲೆಯಲ್ಲಿ ಬಿದ್ದೆನಲ್ಲ! ಇದೆಂಥ ಮೂಢತನ! ಹೀಗೆಂದು ನಾರಾಯಣ ಮನಸ್ಸಿನಲ್ಲಿ ತನ್ನನ್ನು ತಾನೇ ಹಳಿದುಕೊಂಡ.

ಆದರೆ ಮತ್ತೆ ಅವನಿಗೆ ತುಸು ಹೆಚ್ಚು ಧೈರ್ಯ ಬಂತು. ತಾನು ಇಂದು ಕೆಲಸಕ್ಕೆ ಬಂದುದು ಒಳ್ಳೆಯದೆ ಆಯಿತು. ಇಲ್ಲವಾಗಿದ್ದರೆ ಅದೊಂದು ಪ್ರಬಲವಾದ ಸಂಶಯಕ್ಕೆ ಕಾರಣವಾಗುತ್ತಿತ್ತು. ಎಲ್ಲರೂ, ನಾರಾಯಣ ಎಲ್ಲಿಗೆ ಹೋದ, ಅವನು ಏಕಾಗಿ ಕೆಲಸಕ್ಕೆ ಬರಲಿಲ್ಲ ಎಂದು ಆಶ್ಚರ್ಯ ಪಡುತ್ತಿದ್ದರು. ಅದೂ ಇದೇ ದಿನ ಅವನು ಮನೆಯಲ್ಲಿ ಕುಳಿತುಕೊಳ್ಳಬೇಕಿತ್ತೆ? ಎಂದು ಅವರಿಗೆಲ್ಲ ಸಂಶಯವಾಗಬಹುದಿತ್ತು. ಈಗಲಾದರೊ ಆ ಸಂಶಯವಿಲ್ಲ. ಮತ್ತೆ, ರಕ್ತದ ಬಿಂದುಗಳು: ಅವೇನಾದರೂ ಮನುಷ್ಯನದ್ದೇ ಆಗಿರಬೇಕಿಲ್ಲ. ಬಸ್ಸು ಹೋಗುವಾಗ ಎಷ್ಟು ಕೋಳಿಗಳು, ಎಷ್ಟು ಆಡುಗಳು, ಎಷ್ಟು ನಾಯಿಗಳು ಅದರ ಚಕ್ರದಡಿಗೆ ಬೀಳುತ್ತವೆ! ಅವುಗಳ ರಕ್ತವೂ ಮನುಷ್ಯರ ರಕ್ತದಂತೆ ಕೆಂಪು ಬಣ್ಣದ್ದೇ. ಆದರೆ ಅವುಗಳ ಜೀವಕ್ಕೆ ಮನುಷ್ಯರ ಜೀವದಷ್ಟು ಪ್ರಾಶಸ್ತ್ಯವಿಲ್ಲ. ಅಂಥ ಕೆಂಪು ಬಣ್ಣದ ಬೊಟ್ಟುಗಳು ವೀಳ್ಯ ಜಗಿದು ಉಗುಳಿದರೂ ಕಾಣಬಹುದು. ಮತ್ತೇಕೆ ತಾನು ಸುಮ್ಮನೆ ಭಯಪಡಬೇಕು? ಈ ಪೋಲೀಸರೆಲ್ಲ ಹೀಗೆಯೇ ಯಾವಾಗಲೂ ಅತ್ತಿತ್ತ ತಿರುಗಾಡುತ್ತಿರುವವರು. ಅವರಿಗೆ ಎಲ್ಲಿಗೆ ಹೋಗಬೇಕಾದರೂ ಪುಕ್ಕಟೆ ವಾಹನಗಳಿವೆ. ಆ ಪೋಲೀಸಿನವ ತನ್ನಿಂದ ಹಣ ಕಸಿದುಕೊಳ್ಳಲೂ ಯತ್ನಿಸಿರಬಹುದು. ಎಲ್ಲಿ ಏನಾಗಿದೆಯೆಂಬುದು ಅವನಿಗೆ ಅಷ್ಟು ಬೇಗ ಹೇಗೆ ತಿಳಿದಿರಬೇಕು? ತಿಳಿದರೂ ಅವನು ಅಷ್ಟು ತ್ವರ್ಯದಲ್ಲಿ ಈ ಹದಿನಾರು ಮೈಲು ದೂರದಲ್ಲಿರುವ ಅಧಿಕಾರಿಗೆ ಹೇಗೆ ತಿಳಿಸಬಲ್ಲ?

ಹೀಗೆಲ್ಲ ವಿಚಾರಗಳನ್ನು ದ್ವಂದ್ವವಾಗಿ ನಾರಾಯಣ ಆಲೋಚಿಸುತ್ತಿರುವಾಗ ಪೋಲೀಸು ಅಧಿಕಾರಿ ಅವನೊಡನೆ "ಏನಯ್ಯ, ಇದರಲ್ಲಿ ಸರಿಯಾಗಿ ಫಯರಿಂಗ್ ಆಗುವುದಿಲ್ವೇ? ಗಡ ಗಡ ಎಂದು ಶಬ್ದವಾಗುತ್ತದಲ್ಲ!" ಎಂದರು.

"ಹೌದು ಸ್ವಾಮಿ" ಎಂದು ನಾರಾಯಣ ನಗುತ್ತ ತಲೆದೂಗಿದ, ಅವರನ್ನು ಮೆಚ್ಚಿಲಿಸಕ್ಕಾಗಿ.

"ಹೊಸ ಪ್ಲಗ್ ಗಳನ್ನು ಹಾಕಿಸ್ಬೇಕು. ಆದ್ರಿಂದ್ಲೇ ಇಷ್ಟು ಮೆಲ್ಲಗೆ

ಇದು ಸಾಗುತ್ತದೆ, ಅಲ್ವೇ? ಪೆಟ್ರೋಲು ವಿಪರೀತ ಖರ್ಚಾಗುತ್ತದೆ."

"ಹೌದು ಸ್ವಾಮಿ" ಎಂದು ನಾರಾಯಣ ಪುನಃ ತಲೆದೂಗಿದ.

ಆದರೆ ಅವನ ಮನಸ್ಸಿನಲ್ಲಿ, ಈ ಅಧಿಕಾರಿ ಎಲ್ಲೋ ಪುಸ್ತಕಗಳಲ್ಲಿ ಫಯರಿಂಗ್ ಪ್ಲಗ್ ಮುಂತಾದವುಗಳ ಕುರಿತು ಓದಿರಬೇಕು. ಆ ಪಾಂಡಿತ್ಯವನ್ನು ತನ್ನೊಡನೆ ಈಗ ಪ್ರದರ್ಶಿಸುತ್ತಾನೆ, ತಾನು ಅವನು ಹೇಳಿದುದನ್ನು ಆಕ್ಷೇಪಿಸಿದರೆ ಅವನಿಗೆ ತನ್ನ ಮೇಲೆ ಕೋಪ ಬಾರದಿರಲಿಕ್ಕಿಲ್ಲ—ಎಂದು ಭಾವಿಸಿದ.

ಅಧಿಕಾರಿ ಇನ್ನೂ ನಾರಾಯಣನನ್ನೇ ನೋಡುತ್ತಿದ್ದರು. ಅವನು ಗೇರನ್ನು ಬದಲಿಸುವುದು, ಎಕ್ಸಲರೇಟರನ್ನು ಒತ್ತುವುದು, ಬ್ರೇಕ್ ಹಾಕುವುದು, ರಸ್ತೆಯಲ್ಲಿದ್ದ ಕಲ್ಲುಗಳನ್ನೂ ಹೊಂಡಗಳನ್ನೂ ತಪ್ಪಿಸುವುದು ಇತ್ಯಾದಿ ಕ್ರಿಯೆಗಳನ್ನು ಅವರು ಪರಿಶೀಲಿಸುತ್ತಿದ್ದರು. ನಾರಾಯಣನಿಗೆ ಆಗಾಗ ಅವರ ವರ್ತನೆಯನ್ನು ಕಂಡು ಸಂಶಯವಾಗುತ್ತಿತ್ತು, ಒಮ್ಮೊಮ್ಮೆ ಭಯವೂ ಆಗುತ್ತಿತ್ತು.

ಬಸ್ಸು ಮತ್ತೊಂದು ನಿಲ್ದಾಣವನ್ನು ತಲುಪಿತು. ಪೋಲೀಸು ಅಧಿಕಾರಿಗಳು ಸ್ವಲ್ಪ ಹಿಂದೆ ಪೋಲೀಸು ಠಾಣೆಯ ಬಳಿ ಬಸ್ಸಿನಿಂದಿಳಿದಿದ್ದರು. ನಾರಾಯಣ ಕೆಳಗಿಳಿದು ಕಾಫಿ ಹೋಟೇಲಿಗೆ ಹೋದ. ಅವನು ಕಾಫಿ ಕುಡಿಯುತ್ತಿದ್ದಾಗ ಒಬ್ಬ ಒಂದು ಪತ್ರಿಕೆಯನ್ನು ತಂದ. ಅದು ನಾರಾಯಣನ ಬಸ್ಸಿನಲ್ಲೇ ಬಂದಿತ್ತು.

ಅವನಿಗೆ ಆಗ ದೊಡ್ಡ ಅಕ್ಷರಗಳ ತಲೆ ಬರಹವುಳ್ಳ ಒಂದು ಸುದ್ದಿ ಗೋಚರಿಸಿತು.

## ಮೋಟಾರ್ ಅಪಘಾತದಲ್ಲಿ ಮುದುಕನ ಮರಣ

### ಅಪರಾಧಿಯ ಪತ್ತೆಯಾಗಿಲ್ಲ

**ಮಂಗಳೂರು :** ಜೂನ್ ೨೦ : ನಿನ್ನೆ ಸಂಜೆಗೆ ಇಲ್ಲಿ ಒಂದು ಮೋಟರ್ ಅಪಘಾತಕ್ಕೀಡಾದ ಸುಮಾರು ೫೫ ವರ್ಷ ಪ್ರಾಯದ ಮುದುಕನೊಬ್ಬನು ರಾತ್ರಿ ೧೧ ಗಂಟೆಗೆ ಆಸ್ಪತ್ರೆಯಲ್ಲಿ ಮೃತಪಟ್ಟಿರುತ್ತಾನೆ.

ಮೃತನು ಸಂಜೆಗೆ ತಿರುಗಾಡಲಿಕ್ಕೆ ಹೋಗಿದ್ದನೆಂದೂ ಆಗ ಒಂದು ವಾಹನವು ಅವನನ್ನು ನೆಲಕ್ಕಪ್ಪಳಿಸಿತೆಂದೂ ಹೇಳಲಾಗಿದೆ. ಅವನ ತಲೆಗೂ ಕಾಲುಗಳಿಗೂ ಪ್ರಾಣಾಂತಿಕ ಜಖಂಗಳಾಗಿದ್ದವು. ಆಸ್ಪತ್ರೆಗೆ ಅವನನ್ನು ಅಂಬ್ಯುಲೈನ್ಸಿನಲ್ಲಿ ಒಯ್ಯುವಾಗಲೇ ಅವನಿಗೆ ಸ್ಮೃತಿ ಇರಲಿಲ್ಲವೆಂದು ತಿಳಿದು ಬರುತ್ತದೆ.

ಮೃತನು ಯಾರೆಂಬುದು ಇನ್ನೂ ತಿಳಿದಿಲ್ಲ. ಅವನ ಸಂಬಂಧಿಕರನ್ನು ಪತ್ತೆ ಹಚ್ಚಲು ಪೋಲೀಸರು ಪ್ರಯತ್ನಿಸುತ್ತಿದ್ದಾರೆ.

ವಾಹನದ ಗುರುತು ಇನ್ನೂ ಸಿಗದಿದ್ದರೂ ಅದು ಭಾರವಾದ ಮೋಟಾರಿರಬಹುದೆಂದು ಊಹಿಸಲಾಗಿದೆ.

ಪೋಲೀಸರು ತನಿಖೆ ನಡೆಸುತ್ತಿದ್ದಾರೆ.

— ಹೀಗೆಂದು ಅದರಲ್ಲಿ ಬರೆದಿತ್ತು.

೩

ಸಂಜೆ ನಾರಾಯಣ ಬಸ್ ನಿಲ್ದಾಣಕ್ಕೆ ಹಿಂತಿರುಗುವಾಗ ಅವನನ್ನು ಕಾದು ಅವನ ಭಾವ ಮುತ್ತ ನಿಂತಿದ್ದ. ನಾರಾಯಣ ಬಸ್ಸನ್ನು ನಿಲ್ಲಿಸಿದೊಡನೆ ಅವನು ಬಳಿಗೆ ಬಂದ. ಅವನ ಮುಖವನ್ನು ನೋಡುವಾಗಲೇ ನಾರಾಯಣನಿಗೆ ಸಂದೇಹವಾಯಿತು. ಅದರಲ್ಲಿ ಕಳೆಯಿರಲಿಲ್ಲ.

"ಏನು ಮುತ್ತ? ನನ್ನನ್ನು ಕಾಯುತ್ತಿದ್ದಿಯಾ?" ಎಂದು ನಾರಾಯಣ ಕೇಳಿದ.

"ನಿನಗೆ ಗೊತ್ತಿಲ್ವೆ?" ಎಂದು ಮುತ್ತ ನಿಟ್ಟುಸಿರು ಬಿಡುತ್ತ ಕೇಳಿದ.

ನಾರಾಯಣ ಅವನ ಮುಖವನ್ನೇ ನೋಡಿದ. ಅವನಿಗೆ ಏನೆನ್ನಬೇಕೆಂದು ಆಗ ತೋಚಲಿಲ್ಲ.

ಆದುದರಿಂದ "ಅಪ್ಪ ತೀರಿಕೊಂಡರು. ಹೆಣವನ್ನು ಮನೆಗೆ ತಂದಿದ್ದೇವೆ" ಎಂದು ಮುತ್ತನೇ ಹೇಳಬೇಕಾಯಿತು.

ನಾರಾಯಣ ಸ್ವಲ್ಪ ಹೊತ್ತು ಮಾತಾಡಲಿಲ್ಲ. ಕೊನೆಗೆ ಮೋನಪ್ಪ ಅವನ ಬಳಿಗೆ ಬಂದಾಗ ಬಸ್ಸನ್ನೇರಿ ಕುಳಿತು ಮುತ್ತನನ್ನೂ ಕರೆದು ಕುಳಿತುಕೊಳ್ಳಲು ಸಂಜ್ಞೆ ಮಾಡಿದ. ಬಸ್ಸು ಗ್ಯಾರೇಜಿಗೆ ಹೋಯಿತು.

"ನಾನು ನಾಳೆ ಬರೋದಿಲ್ಲ," ಎಂದು ಅಲ್ಲಿ ಅವನು ಮೋನಪ್ಪ ನೊಡನೆ ಹೇಳಿದ. "ಅಲ್ಲಿ ಹೇಳಿ ಹೋಗು. ನನ್ನ ಮಾವ ತೀರಿದ್ದಾರೆನ್ನು"

"ರಜಾ ಅರ್ಜಿ ?"

"ನಾನು ಬಂದು ಮಾಡುತ್ತೇನೆ" ಎನ್ನುತ್ತ ಅವನು ಮುತ್ತನೊಡನೆ ಹೊರಗೆ ಹೋಗಿಯೇ ಬಿಟ್ಟ.

ದಾರಿಯಲ್ಲಿ ಅವರಿಬ್ಬರೂ ಮಾತಾಡಲಿಲ್ಲ.

ಆದರೆ ನಾರಾಯಣನ ಮನಸ್ಸು ಹೊಯ್ದಾಟದಲ್ಲಿ ಬಿದ್ದಿತ್ತು. ಅವನಿಗೆ ಸಂಶಯವೆಂದರೆ ಮುತ್ತನಿಗೆ ತನ್ನ ಮೇಲೆ ಆಗಲೇ ಏನಾದರೂ ಸಂದೇಹ ಬಂದಿದೆಯೋ ಎಂಬುದು. ಹಾಗೆ ಸಂಶಯ ಬಂದಿದ್ದರ? ತನ್ನನ್ನು ಹುಡುಕಲಿಕ್ಕೆ ಅವನು ಬಂದಿರಬಹುದೆ? ಈ ಒಳಗೇ ಪೇಟೆ ಯಿಡೀ ತಾನೇ ಕೊಂದವನೆಂಬ ಸುದ್ದಿ ಹರಡಿರಲೂ ಸಾಕು. ತನ್ನನ್ನು ಇನ್ನು ಯಾವ ಕ್ಷಣದಲ್ಲೂ ಪೋಲೀಸರು ಕೈದು ಮಾಡಿಕೊಂಡು ಹೋಗ ಬಹುದು. ತನ್ನ ಜೀವ ಉಳಿಯಬೇಕಾದರೆ ತಾನು ಈಗಲೇ ತಪ್ಪಿಸಿ ಕೊಳ್ಳುವುದೊಳ್ಳೆಯದು ಎಂದು ಅವನು ತರ್ಕಿಸುತ್ತಿದ್ದ. ಆದ್ದರಿಂದಲೇ ಅವನಿಗೆ ಮುತ್ತನೊಡನೆ ಯಾವೊಂದು ವಿವರವನ್ನು ಕೇಳಲೂ ಸಾಧ್ಯ ವಾಗಲಿಲ್ಲ. ಮಾವ ಸತ್ತುದು ಹೇಗೆ, ಎಲ್ಲಿ, ಎಂದು, ಎಂಬಿತ್ಯಾದಿ ವಿವರಗಳನ್ನು ಕೇಳಬೇಕೆಂಬ ಇಚ್ಛೆ ಅವನಿಗಿತ್ತು. ಆದರೆ ಈ ಒಳಗೇ ಅವನಿಗೆ ತನ್ನ ಕೃತ್ಯದ ಕುರಿತು ತಿಳಿದಿದ್ದರೆ ಅವನು ತನ್ನ ನಟನೆ ಯನ್ನು ಕಂಡು ಹಿಡಿದಾನು ಎಂದು ಭಯಪಟ್ಟ.

"ಇವತ್ತು ಬೆಳಗ್ಗೆ ನಾನು ಸ್ಟ್ಯಾಂಡಿಗೆ ಬಂದೆ. ಆದರೆ ನೀನು ಹೋಗಿಯಾಗಿತ್ತು," ಎಂದು ಮುತ್ತ ಹೇಳಿದ, ಮನೆಯ ಸಮೀಪ ವಾಗುವಾಗ.

"ಆದ್ರೆ ನಾ ಹೋಗುವಾಗ ಆರೂವರೆಯಾಗಿತ್ತು;" ಎಂದು ನಾರಾಯಣ ನಿಧಾನವಾಗಿ ಹೇಳಿದ.

"ಆಗತಾನೇ ಹೋದಿ ಎಂದು ಕಪ್ಪಿತ್ತಯವರು ಹೇಳಿದ್ರು. ಮತ್ತೆ ಆಸ್ಪತ್ರೆಗೆ ಹೋಗಿ ಹೆಣ ತರ್ಬೇಕಿತ್ತು. ಅವ್ರು ಅದನ್ನು ಬಿಟ್ಟು ಕೊಡು ವಾಗ ಮೂರುಗಂಟೆಯಾಗಿತ್ತು."

"ಅಷ್ಟೊಂದು ತಡ ಮಾಡಿದ್ರೆ ಅಲ್ವೆ ?"

"ಹೂಂ. ರುಕ್ಕು ಆಗಲೇ ಬಂದಿದ್ದಾಳೆ. ಮಕ್ಕಳೂ ಅವಳೊಡನೆ ಬಂದಿರುವರು. ಅಣ್ಣನಿಗೆ ಟೆಲಿಗ್ರಾಂ ಕಳಿಸಿದೆ. ಅವನು ತನ್ನನ್ನು ಕಾಯುವುದು ಬೇಡವೆಂದು ಉತ್ತರಿಸಿದ್ದಾನೆ."

ಈಗಲಾದರೂ ಎಲ್ಲ ವಿವರಗಳನ್ನೂ ಕೇಳಿ ಬಿಡೋಣವೆಂದು ನಾರಾಯಣನಿಗೊಮ್ಮೆ ಮನಸ್ಸಾಯಿತು. ಆದರೆ ಕೇಳಲು ಮತ್ತೂ ಧೈರ್ಯ ಬರಲಿಲ್ಲ. ಕೇಳದಿದ್ದರೆ, ತನಗೆ ಆ ವಿವರಗಳು ಹೇಗೆ ಮೊದಲೇ ಗೊತ್ತಾದುವೆಂದು ಮುತ್ತ ಆಶ್ಚರ್ಯ ಪಡಲೂ ಸಾಕು. ಹೇಗಾದರೂ ತಾನು ಸುಮ್ಮನಿರುವುದೇ ಲೇಸೆಂದು ಮತ್ತೆ ಅವನಿಗೆ ತೋರಿತು.

ಮುತ್ತ ಮನೆಯೊಳಗೆ ಹೋದ. ನಾರಾಯಣ ಅಲ್ಲೇ ಬಾಗಿಲಲ್ಲಿ ನಿಂತುಕೊಂಡ. ಅಲ್ಲಿ ಜಗಲಿಯಲ್ಲಿ ಹೆಣವನ್ನು ಮುಸುಕುಹಾಕಿ ಮಲ ಗಿಸಿದ್ದರು. ನೊಣಗಳು 'ಗೊಂಯ್' ಎಂದು ಹಾರಾಡುತ್ತಿದ್ದುವು. ನಾರಾಯಣನಿಗೆ ಒಮ್ಮೆಲೇ ಮನಸ್ಸನ್ನು ಹಿಡಿದು ಜಗ್ಗಿದಂತಾಯಿತು. ಅವನಿಗೆ ತನ್ನ ಕಾಲುಗಳ ಮತ್ತು ಸೊಂಟದ ಕೀಲುಗಳಿಂದ ಶಕ್ತಿಯು ಫಕ್ಕನೆ ಮಾಯವಾದಂತೆ ಭಾಸವಾಯಿತು. ಅವನು ತಲೆಗೆ ಒಂದು ಕೈಯ್ಯನ್ನಿಟ್ಟು ಹೊಸ್ತಿಲಲ್ಲೇ ಕುಳಿತುಕೊಂಡ. ಅವನ ಹೆಂಡತಿ ರುಕ್ಕು ಒಳಗೆ ಅಳುವುದು ಕೇಳುತ್ತಿತ್ತು. ಅವನ ಮಗಳು ಪುಟ್ಟು ಅಲ್ಲಿ ತಿರು ಗಾಡುತ್ತಿದ್ದಳು. ಅವಳಿಗೆ ಒಂದೂ ತಿಳಿಯುತ್ತಿದ್ದಿಲ್ಲ. ಅವಳು ಅಷ್ಟು ಚಿಕ್ಕವಳು.

ನಾರಾಯಣನಿಗೆ ರುಕ್ಕುವನ್ನು ಮದುವೆಯಾಗಿ ಹತ್ತು ವರ್ಷ ಗಳು ಕಳೆದಿದ್ದುವು. ಅವನ ಮಾವ ದೂಮನಿಗೆ ರುಕ್ಕುವಿನ ಮೇಲೆ

ತುಂಬಾ ಪ್ರೀತಿ. ಅವಳು ಅವನಿಗೆ ಒಬ್ಬಳೆ ಮಗಳು. ಅವಳನ್ನು ಹೆತ್ತು ಕೆಲವು ದಿನಗಳಲ್ಲೇ ಅವಳ ತಾಯಿ ತೀರಿಕೊಂಡಿದ್ದಳು. ಆ ಬಳಿಕ ಅವಳ ಆರೈಕೆಯನ್ನು ನೋಡಿ ಅವಳನ್ನು ರಕ್ಷಿಸಿದವ ದೂಮನೇ. ಅವನ ಗಂಡು ಮಕ್ಕಳಾದರೂ ಆಗ ದೊಡ್ಡವರಾಗಿದ್ದರು. ಒಬ್ಬ ಸಾಲೆಗೆ ಹೋಗುತ್ತಿದ್ದ. ಮತ್ತೊಬ್ಬ ಮೋಟರಿನ ಕೆಲಸಕ್ಕೆ ಸೇರಿದ. ರುಕ್ಕು ವಿಗೂ ತಂದೆಯೆಂದರೆ ಪ್ರಾಣ. ಅವಳು ಮದುವೆಯಾದ ಬಳಿಕವೂ ಎರಡು ಮೂರು ದಿನಕ್ಕೊಂದಾವರ್ತಿ ಅವನನ್ನು ನೋಡಲು ಹೋಗ ದಿಲ್ಲ. ವರ್ಷಕ್ಕೆ ಒಂದೆರಡು ಸೀರೆಗಳನ್ನೂ ಅವನು ತೆಗೆದುಕೊಡುತ್ತಿದ್ದ ನಲ್ಲದೆ, ಅವಳಿಗೆ ಆಗಾಗ ಹಣವನ್ನೂ ಕೊಡುತ್ತಿದ್ದ.

ಅವಳನ್ನು ನಾರಾಯಣನಿಗೆ ಮದುವೆ ಮಾಡಿಕೊಡಲು ದೂಮ ನಿಗೆ ಇದ್ದ ಮುಖ್ಯ ಕಾರಣವೆಂದರೆ ನಾರಾಯಣ ಆಗ ಮನೆಯಲ್ಲಿ ಒಬ್ಬನೆ ಇದ್ದವ. ಅವನ ಅಣ್ಣ–ತಮ್ಮಂದಿರೆಲ್ಲ ಹಳ್ಳಿಯಲ್ಲಿದ್ದರು. ಆದ್ದರಿಂದ ರುಕ್ಕುವಿಗೆ ಅಲ್ಲಿ ಏನೂ ಕಷ್ಟವಿರಲಿಕ್ಕಿಲ್ಲವೆಂದು ದೂಮ ಊಹಿಸಿದ್ದ. ಮತ್ತೆ ನಾರಾಯಣನ ಪರಿಚಯವೂ ಅವನ ಹಿರಿಯಮಗ ಮುಂಡಪ್ಪನ ಮೂಲಕವಾದುದು. ನಾರಾಯಣ ಮುಂಡಪ್ಪನಿಂದಲೇ ಮೋಟರಿನ ಕೆಲಸವನ್ನು ಕಲಿತವ. ಮತ್ತೆ ಕೆಲವು ಸಮಯ ಅವರಿಬ್ಬರೂ ಒಟ್ಟಿಗೆ ಕೆಲಸವನ್ನೂ ಮಾಡುತ್ತಿದ್ದರು. ಮುಂಡಪ್ಪ ಡ್ರೈವರನಾಗಿ ದ್ದಾಗ ನಾರಾಯಣ ಅದೇ ಬಸ್ಸಿನಲ್ಲಿ ಕ್ಲೀನರ–ಕಂಡಕ್ಟರನಾಗಿದ್ದ. ಆದು ದರಿಂದ ಮುಂಡಪ್ಪನಿಗೆ ನಾರಾಯಣನ ಮೃದುಸ್ವಭಾವ, ಪ್ರಾಮಾಣಿಕ ವರ್ತನೆಗಳ ಅರಿವು ಚೆನ್ನಾಗಿ ಆಗಿತ್ತು. ನಾರಾಯಣನನ್ನು ಅವನು ಚೆನ್ನಾಗಿ ಪರೀಕ್ಷಿಸಿದ್ದ. ನಾರಾಯಣನಿಗೆ ಮೋಟರ್ ನಡೆಸಲು ಕಲಿಸಿ ದವನೂ ಅವನೇ. ಹಾಗಾಗಿ ತನ್ನ ತಂದೆಯು ತನ್ನ ತಂಗಿಗೆ ಗಂಡ ನನ್ನು ಹುಡುಕುತ್ತಿದ್ದಾಗ ಮುಂಡಪ್ಪನಿಗೆ ನಾರಾಯಣನ ನೆನಪು ಸ್ವಾಭಾವಿಕವಾಗಿಯೇ ಆಯಿತು. ದೂಮನಿಗೂ ನಾರಾಯಣ ಯೋಗ್ಯ ತರುಣನಾಗಿ ಕಂಡ. ಆದುದರಿಂದ ರುಕ್ಕುವನ್ನು ನಾರಾಯಣನಿಗೆ ತನ್ನ ಖರ್ಚಿನಿಂದಲೇ ಮದುವೆ ಮಾಡಿಸಿಕೊಟ್ಟ.

ದೂಮನಿಗೆ ಒಂದು ಚಿಕ್ಕ ಅಂಗಡಿಯಿತ್ತು. ಅದರಲ್ಲಿ ಸ್ವಲ್ಪ ಬೀಡಾ ಬೀಡಿ, ಬಾಳೆಹಣ್ಣು, ಎಳನೀರು ಮುಂತಾದವುಗಳ ಮಾರಾಟ ವಾಗುತ್ತಿತ್ತು. ಅಲ್ಲದೆ, ದೂಮನಿಗೆ ಕೊಡೆ ದುರಸ್ತಿ ಮಾಡುವುದು, ಚಿತ್ರಗಳಿಗೆ ಚೌಕಟ್ಟು ಕಟ್ಟುವುದು, ಇಲಿಗಳ ಗೂಡನ್ನು ತಯಾರಿಸು ವುದು ಮುಂತಾದ ಚಿಕ್ಕ ಚಿಕ್ಕ ಕೆಲಸಗಳೂ ಚೆನ್ನಾಗಿ ತಿಳಿದಿದ್ದುವು. ಮುತ್ತನಿಗೆ ಹೊಲಿಗೆ ಕಲಿಸಿ ಅವನಿಗೊಂದು ಹೊಲಿಗೆಯ ಯಂತ್ರವನ್ನು ತೆಗೆಸಿಕೊಟ್ಟ. ತನ್ನ ಅಂಗಡಿಯ ಒಂದು ಮೂಲೆಯಲ್ಲೇ ಕೆಲಸ ಮಾಡಿ ಸುತ್ತಿದ್ದ.

ಆದರೆ ಅವನೊಡನೆ ಎಷ್ಟು ಹಣವಿದೆಯೆಂಬುದು ಯಾರಿಗೂ ಗೊತ್ತಿರಲಿಲ್ಲ. ದೂಮನೆಂದರೆ ಕೇವಲ ಬಡವನಲ್ಲವೆಂಬುದು ಹೆಚ್ಚು ಕಡಿಮೆ ಎಲ್ಲರಿಗೂ ತಿಳಿದಿತ್ತು. ಅವನಿಗೆ ಬಾಳೆ ಹಣ್ಣಿನ ವ್ಯಾಪಾರದಲ್ಲಿ ತುಂಬಾ ಲಾಭ ಸಿಕ್ಕಿದೆಯೆಂದು ಕೆಲವರು ಹೇಳುತ್ತಿದ್ದರೆ ಇನ್ನು ಕೆಲ ವರು ತೆಂಗಿನಕಾಯಿಯ ವ್ಯಾಪಾರದಲ್ಲಿ ಒಂದಕ್ಕೆರಡು ಲಾಭ ಸಿಕ್ಕಿದೆ ಯೆನ್ನುತ್ತಿದ್ದರು. ವ್ಯಾಪಾರವಿಲ್ಲದೆ ಚಿಲ್ಲರೆ ಕೆಲಸಗಳೂ ತುಬಾ ಅವನಿಗೆ ಬರುತ್ತಿದ್ದುವು. ಯಾವುದಕ್ಕೂ ಅವನು ವಿಶೇಷ ಮಜೂರಿ ಹೇಳಲಾರ. ಕೆಲಸ ಮಾತ್ರ ನಾಜೂಕು ಒಳ್ಳೆ ಗಟ್ಟಿ ಮುಟ್ಟು. ಈ ಪ್ರಸಿದ್ಧಿ ಯಿಂದಾಗಿ ಅವನಿಗೆ ಯಾವಾಗಲೂ ಬಿಡುವಿಲ್ಲದಷ್ಟು ಕೆಲಸವಿತ್ತು. ಕೆಲವುವೇಳೆ ರಾತ್ರಿಯಲ್ಲೂ ಅಂಗಡಿಯಲ್ಲಿ ಕುಳಿತುಕೊಂಡು ಕೆಲಸ ಮಾಡುತ್ತಿದ್ದ. ಮತ್ತೆ ಅವನ ದುಂದುಗಾರಿಕೆಯ ಒಂದೇ ಒಂದು ಅಭ್ಯಾಸವೆಂದರೆ ಚಹ ಮಾತ್ರ. ಅದನ್ನು ದಿನಕ್ಕೆ ಆರೇಳು ಬಾರಿ ಯಾದರೂ ಅವನಿಗೆ ಕುಡಿಯಬೇಕಾಗುತ್ತಿತ್ತು. ಮತ್ತೆ ಯಾವುದಕ್ಕೂ ಅವನು ಹಣವ್ಯಯ ಮಾಡುತ್ತಿದ್ದಿಲ್ಲ. ಹೆಂಡತಿ ಸತ್ತ ಬಳಿಕ ತನ್ನ ಮಗಳು ದೊಡ್ಡವಳಾಗುವ ತನಕ ಅವನೇ ಅಡುಗೆ ಕೂಡಾ ಮಾಡು ತ್ತಿದ್ದ. ಮುತ್ತನನ್ನು ಸಾಲೆಗೆ ಕಳಿಸುತ್ತಿದ್ದ. ಇಷ್ಟಾದರೂ ಅವನು ಕೆಲಸ ಮಾಡಿ ಸೋತುಹೋದುದಿಲ್ಲ. ಒಂದು ದಿನವಾದರೂ ಮನೆಯಲ್ಲಿ ಸೋಮಾರಿಯಾಗಿ ಉಳಕೊಂಡುದಿಲ್ಲ. ಒಂದೆರಡು ವರ್ಷಗಳಿಂದ ಮಾತ್ರ ಅವನಿಗೆ ಒಂದು ಉಬ್ಬಸದ ರೋಗ ಆರಂಭವಾಗಿತ್ತು. ಅದ

ರಿಂದಾಗಿ ಅವನಿಗೆ ರಾತ್ರೆ ಮಲಗಿದರೂ ನಿದ್ದೆ ಬರುತ್ತಿದ್ದಿಲ್ಲ. ಆದರೆ ಕೆಲಸವನ್ನು ಮಾತ್ರ ಎಂದಿನಂತೆಯೇ ಮಾಡುತ್ತಿದ್ದ.

ಆ ರೋಗವನ್ನು ಪರೀಕ್ಷಿಸಲಿಕ್ಕೆಂದು ಕೆಲವು ದಿನಗಳ ಹಿಂದೆ ಮುತ್ತ ಮತ್ತು ನಾರಾಯಣರ ಒತ್ತಾಯಕ್ಕಾಗಿ ಅವನು ಒಬ್ಬ ಡಾಕ್ಟರರಲ್ಲಿಗೆ ಹೋಗಿದ್ದ. ಅವರು ಅವನ ರಕ್ತ, ಎಂಜಲು ಮತ್ತು ಮೂತ್ರವನ್ನು ಪರೀಕ್ಷಿಸಿದ್ದರು. ಬಳಿಕ ಅವನ ಎದೆಯೊಳಗಿನ ಚಿತ್ರ ತೆಗೆದರು. ಅವನ್ನೆಲ್ಲ ನೋಡಿ ಕೊನೆಗೆ ಅವನಿಗೆ ಕ್ಷಯರೋಗವಿದೆಯೆಂದೂ, ಅವನು ಸರಿಯಾಗಿ ಆರೈಕೆ ನೋಡಿಕೊಳ್ಳುತ್ತಿದ್ದರೆ ಅದು ಪ್ರಾಣಾಂತಿಕವಾಗದೆಂದೂ ಅವರು ಹೇಳಿದ್ದರು.

ದೂಮನಿಗೆ ಇದನ್ನು ಕೇಳಿ ಗಾಬರಿಯಾಯಿತು. ತಾನು ಹೇಗಾದರೂ ಮುದುಕನಾಗಿರುವವ; ಆದರೆ ಮೃತ್ಯುವು ತನ್ನ ಮನೆಯ ಹೊಸ್ತಿಲಲ್ಲೇ ಬಂದು ನಿಂತಿದೆ, ಅದು ವರ್ಚಸ್ಸನ್ನು ಆಗಲೇ ತನ್ನ ದೇಹದ ಮೇಲೆ ಬೀರಿದೆ ಎಂದು ತಿಳಿದು ಅವನು ಅತ್ತೇಬಿಟ್ಟಿದ್ದ. ಅವನನ್ನು ಸಮಾಧಾನ ಪಡಿಸುವುದು ಮುತ್ತನಿಗಾಗಲೀ ನಾರಾಯಣನಿಗಾಗಲೀ ಸಾಧ್ಯವಾಗಲಿಲ್ಲ. ರುಕ್ಕುವೂ ಅಳತೊಡಗಿದಳು. ದೂಮ ಎರಡು ದಿನ ಮನೆಯಲ್ಲೇ ಕುಳಿತುಕೊಂಡ. ಡಾಕ್ಟರರ ಮಾತನ್ನು ಕೇಳಿಯೋ ಏನೋ ಎಂಬಂತೆ ಅವನಿಗೆ ತಾನು ತುಂಬಾ ಅಶಕ್ತನಾಗಿದ್ದೇನೆ, ತನ್ನ ತಲೆ ತಿರುಗುತ್ತಿದೆ, ತನಗೆ ಹಸಿವಾಗುವುದಿಲ್ಲ ಎಂಬಿತ್ಯಾದಿಯಾಗಿ ಭಾಸವಾಗುತ್ತಿತ್ತು. ಆಗ ಅವನು ಮನೆಯ ಹೊರಗೆ ಕಾಲು ಹಾಕಲಿಲ್ಲ. ಕೊನೆಗೆ ಅವನಿಗೆ ತಾನು ಕೇವಲ ಅನಿವಾರ್ಯವಾದುದನ್ನು ಎದುರಿಸುತ್ತಿದ್ದೇನೆಂದು ಹೊಳೆದಿರಬೇಕು. ತನ್ನ ಮರಣವೇನಾದರೂ ಒಂದು ಆಕಸ್ಮಿಕ ಘಟನೆಯಲ್ಲವೆಂದು ಅವನಿಗೆ ಆಗ ತೋರಿರಬೇಕು. ಒಂದು ರಾತ್ರೆ ಚೆನ್ನಾಗಿ ಊಟಮಾಡಿದ. ಎಲ್ಲರೊಡನೆಯೂ ನಗುತ್ತ ಮಾತಾಡತೊಡಗಿದ. ಅಂದು ಅವನಿಗೆ ನಿದ್ದೆಯೂ ಸರಿಯಾಗಿ ಬಂತು. ಬೆಳಗ್ಗೆ ಎದ್ದು ಚಹ ಕುಡಿದು ಅಂಗಡಿಗೆ ಹೋದ. ಅವನಿಗೆ ಆಗ ಏನೂ ಬದಲಾವಣೆ ಕಾಣಲಿಲ್ಲ. ಹಿಂದಿ

ನಂತೆಯೇ ಗಿರಾಕಿಗಳೊಡನೆ ಸೌಜನ್ಯದಿಂದ ಮಾತಾಡಿದ. ಹಿಂದಿ ನಂತೆಯೇ ಕೆಲಸಮಾಡತೊಡಗಿದ. ಆದರೆ ಅವನ ಇಚ್ಛೆಗೆ ವಿರುದ್ಧ ವಾಗಿ ಇನ್ನೂ ಕೆಮ್ಮು ಒಮ್ಮೊಮ್ಮೆ ಬರುತ್ತಿತ್ತು. ಬಂದರೆ ಅದು ಒಂದು ಗಂಟೆಯ ತನಕವೂ ಬರುತ್ತಿತ್ತು. ಅದು ನಿಂತೊಡನೆ ಅವನಿಗೆ ಕೆಮ್ಮಿದ ಆಯಾಸದಿಂದಾಗಿ ತುಸು ಹೊತ್ತು ಕೆಲಸ ಮಾಡಲಾಗುತ್ತಿದ್ದಿಲ್ಲ. ಒಮ್ಮೊಮ್ಮೆ ಮಲಗಿಕೊಳ್ಳುವಷ್ಟು ಅವನಿಗೆ ದಣಿವಾಗುತ್ತಿತ್ತು.

ಅದರ ಪರಿಣಾಮವಾಗಿಯೋ ಏನೋ ಅವನು ನಾಲ್ಕುದಿನಗಳ ಹಿಂದೆ ಒಬ್ಬ ವಕೀಲರಲ್ಲಿಗೆ ಹೋಗಿದ್ದ. ಅಲ್ಲಿ ತನ್ನ ಸ್ಥಿತಿಗತಿಗಳನ್ನೆಲ್ಲ ಅವರಿಗೆ ಹೇಳಿ, ತನ್ನ ನಂತರ ತನ್ನ ಸಂಪತ್ತು ಇಂಥಿಂಥವರಿಗೆ ಇಂತಿಷ್ಟು ಸಲ್ಲಬೇಕೆಂಬುದರ ಕುರಿತು ವ್ಯವಸ್ಥೆ ಮಾಡಲು ಒಂದು ದಾಖಲೆಯನ್ನು ತಯಾರಿಸಬೇಕೆಂದು ಅವರನ್ನು ಕೇಳಿಕೊಂಡಿದ್ದ. ಅವರು ತಾನದನ್ನು ಮರುದಿನ ತಯಾರುಮಾಡಿಡುತ್ತೇವೆಂದಿದ್ದರು. ಮರುದಿನ ಅವರಲ್ಲಿಗೆ ದೂಮ, ಮುತ್ತನನ್ನೂ ನಾರಾಯಣನನ್ನೂ ಕರೆದುಕೊಂಡು ಹೋದ. ಅವರಿಗಿಬ್ಬರಿಗೂ ಇದು ಏಕಾಗಿ ಎಂಬುದು ಮೊದಲು ತಿಳಿಯಲಿಲ್ಲ.

ಅಲ್ಲಿ ವಕೀಲರು ಅವನಿಗೆ ಹೀಗೆಂದು ಓದಿ ಹೇಳಿದರು :

"ನಾನು ನನ್ನ ಇಳಿವಯಸ್ಸಿನ ನಿಮಿತ್ತವಾಗಿಯೂ, ನನಗೆ ಪ್ರಾಣಾಂತಿಕವಾದ ಒಂದು ಕಾಹಿಲೆಯು ಅಂಟಿರುವುದರಿಂದಲೂ ನನ್ನಲ್ಲಿರುವ ಸ್ಥಿರ ಚರ ಸೊತ್ತುಗಳೆಲ್ಲ ನನ್ನ ಮೂವರು ಮಕ್ಕಳಿಗೆ ನನ್ನ ಮರಣಾನಂತರ ಹೋಗಬೇಕೆಂಬ ಇಚ್ಛೆಯಾಗಿರುವುದರಿಂದಲೂ ನಾನು ನನ್ನ ಸ್ವಸಂತೋಷದಿಂದ ಈ ವೀಲು ನಾಮೆಯನ್ನು ಬರೆದಿಟ್ಟಿರುತ್ತೇನೆ.

"ನಾನು ಈಗ ವಾಸವಾಗಿರುವ ಮನೆಯೂ,....ಬೇಂಕಿನಲ್ಲಿ ನನ್ನ ಹೆಸರಲ್ಲಿರುವ ಐದು ಸಾವಿರ ರೂಪಾಯಿಗಳೂ ನನ್ನ ಮಗಳಾದ ರುಕ್ಕುವಿಗೂ ಅವಳು ಆಗ ಜೀವಂತಳಿಲ್ಲದಿದ್ದರೆ ಅವಳಿಂದ ಹುಟ್ಟುವ ಮಕ್ಕಳ ಪರಂಪರೆಗೆ ಸಲ್ಲಬೇಕು.

"ನನ್ನ ಹಿರಿಯ ಮಗ ಮುಂಡಪ್ಪನಿಗೆ....ಬೇಂಕಿನಲ್ಲಿರುವ ನನ್ನ ಲೆಕ್ಕದ ಎರಡು ಸಾವಿರ ರೂಪಾಯಿಗಳು ಸಲ್ಲಬೇಕು.

"ಮತ್ತು ನನ್ನ ಕಿರಿಯ ಮಗ ಮುತ್ತನಿಗೆ ನನ್ನ ಅಂಗಡಿ ಹಾಗೂ ಅದರ ವ್ಯಾಪಾರ ಸಿಗಬೇಕು. ಅವನು ಜೀವಂತವಾಗಿರುವ ತನಕ ಅವನು ನನ್ನ ಮನೆಯ ಒಂದು ಭಾಗದಲ್ಲಿ ನನ್ನ ಮಗಳು ರುಕ್ಕುವಿನೊಡನೆ ವಾಸಿಸಬಹುದು.

"ಈ ಮೇಲೆ ವಿವರಿಸಿದ ಸೊತ್ತುಗಳು ನನ್ನ ಸ್ವಾರ್ಜಿತದ್ದಾಗಿರ್ತ್ತವೆ. ಅವುಗಳ ಮೇಲೆ ಯಾರಿಗೂ ಯಾವ ರೀತಿಯ ಹಕ್ಕೂ ಇರುವುದಿಲ್ಲ."

ಇಷ್ಟನ್ನು ಕೇಳಿದ ಬಳಿಕ ಅವರಿಬ್ಬರನ್ನೂ ದೂಮು ಹಿಂದೆ ಕಳಿಸಿದ. ಇಬ್ಬರ ಕಣ್ಣಿನಲ್ಲೂ ಆಗ ಕಣ್ಣೀರು ತುಂಬಿತ್ತು.

"ಇದೇಕೆ ಮಾವ ?" ಎಂದು ನಾರಾಯಣ ಆಗ ಅವನೊಡನೆ ಕೇಳಿದ್ದ. "ನೀವು ಇನ್ನೂ ಹಲವಾರು ವರ್ಷ ಬದುಕುವವರು ಅವ್ರ ಯೋಗ್ಯತೆಯಿದ್ದದ್ದು ಅವ್ರಿಗೆ ದೊರಕ್ತದೆ."

"ನಿಮ್ಗೇಕೆ ಅದೆಲ್ಲ? ನೀವು ಹೋಗಿ. ನನ್ಗೆ ನನ್ನ ಸಂಪತ್ತನ್ನು ಏನೆಲ್ಲ ಮಾಡ್ಬೇಕೆಂದು ಗೊತ್ತಿದೆ. ನೀವೇನಾದ್ರೂ ಹೇಳಿ ಕೇಳಿ ಇವನ್ನು ನಾನು ಬರೆಸಿಲ್ಲ. ಮನುಷ್ಯನ್ಗೆ ತಾನು ಸಾಯೋತನ್ಕವೂ ತಾನು ಸಾಯ್ಲಿಕ್ಕಿಲ್ಲವೆಂದೇ ತೋರ್ತದೆ. ನನ್ಗೂ ಡಾಕ್ಟ್ರು ಮೊನ್ನೆ ಜಾಗ್ರತೆ ಹೇಳ್ಬಿದ್ರೆ ಸಾವು ಇಷ್ಟು ಹತ್ತಿರದಲ್ಲಿದೆಯೆಂದು ಗೊತಾಗ್ತಿರ್ಲಿಲ್ಲ."

ಹೆಣದ ಮುಂದೆ ಕುಳಿತುಕೊಂಡ ನಾರಾಯಣನಿಗೆ ಮಾವನ ಈ ಮಾತುಗಳು ಪದೇ ಪದೇ ಕಿವಿಯಲ್ಲಿ ಪ್ರತಿಧ್ವನಿಸುತ್ತಿದ್ದುವು. ಅವನ ದೇನಾದರೂ ಸ್ವಾಭಾವಿಕವಾದ ಆಯುಷ್ಯ ತೀರಿದ ಮರಣವಲ್ಲ. ಕ್ಷಯ ರೋಗವು ಕೂಡ ಅವನ ಆ ಇಳಿ ವಯಸ್ಸಿನಲ್ಲಿ ಅಷ್ಟು ಬೇಗನೆ ಪ್ರಾಣವನ್ನು ತೆಗೆಯಲು ಸಮರ್ಥವಾಗುತ್ತಿರಲಿಲ್ಲ. ಆದರೂ ಅವನು ಅಷ್ಟು ಮುಂಜಾಗ್ರತೆ ವಹಿಸಿದ. ದಿನವಿಡೀ ದುಡಿಯುತ್ತಿದ್ದ. ಪ್ರಾಣಿಯಂತೆ ಅವನು ಇತರರಿಗೆ ಕಂಡಿದ್ದರೂ, ಅವನ ಹೃದಯ ಮಮತೆಯಿಂದ ಕೂಡಿತ್ತು. ಅವನು ತನ್ನ ಮಗಳು ರುಕ್ಕುವನ್ನು ಅಷ್ಟೊಂದು ಪ್ರೀತಿಸಿದ್ದ. ಹೀಗೆಂದು ಯೋಚಿಸುತ್ತಿರುವಾಗ ನಾರಾಯಣನಿಗೆ ಅವನ ಹೆಂಡತಿ ಆಗಾಗ ಹೇಳುತ್ತಿದ್ದ ಮಾತುಗಳು ನೆನಪಾದುವು.

"ನನ್ನಪ್ಪನಿಗೆ ನಾನು ನನ್ನ ತಾಯಿಯಂತೆಯೇ ತೋರುತ್ತಿದ್ದೇನಂತೆ. ಅವರು ಬೇರೆಯವರೊಡನೆ ಹಾಗೆಯೇ ಹೇಳುತ್ತಾರೆ. ನನ್ನ ತಾಯಿಯ ಪ್ರತಿಬಿಂಬವಾಗಿದ್ದೇನಂತೆ ನಾನು. ಆದ್ದರಿಂದ ಅವರಿಗೆ ನನ್ನನ್ನು ಹೆಚ್ಚು ದಿನ ಬಿಟ್ಟಿರಲು ಆಗುವುದಿಲ್ಲ. ಎರಡು ಮೂರು ದಿನಗಳಿಗೊಮ್ಮೆಯಾದರೂ ಅವರಿಗೆ ನನ್ನನ್ನು ಕಾಣಬೇಕು. ನನಗೆ ಈಗಲೂ ಮಕ್ಕಳಿಗೆ ತಂದುಕೊಡುವಂತೆ ಹೋಟೇಲಿನಿಂದ ತಿಂಡಿ ತಂದು ಕೊಡುತ್ತಾರೆ, ಮನೆಯಲ್ಲಿ ಚಹಾ ತಯಾರಿಸಿಕೊಡುತ್ತಾರೆ, ನನ್ನ ಮೇಲೆ ಅವರಿಗೆ ತುಂಬಾ ಪ್ರೀತಿ. ನಿಮ್ಮ ಮೇಲೂ ಅವರಿಗೆ ತುಂಬಾ ಮಮತೆ ಇದೆ."

ನಾರಾಯಣನಿಗೆ ರುಕ್ಕುವು ಅವಳ ತಂದೆಯನ್ನು ಅಷ್ಟು ಅಗಾಧವಾಗಿ ಪ್ರೀತಿಸುತ್ತಾಳೆಂದು ತಿಳಿದು ಅವನ ಮೇಲೆ ಅಸೂಯೆಯೂ ಕೆಲವು ಸಲ ಆಗಿತ್ತು. ಈ ಮುದುಕ ನಿನ್ನನ್ನೇನೋ ಬಾಯಿಮಾತಿನಲ್ಲಿ ಇಷ್ಟು ಪ್ರೀತಿಸುತ್ತಾನೆ, ಆದ್ರೆ ತಾನು ಕೂಡ್ಸಿಟ್ಟ ಬೊಕ್ಕಸವನ್ನೆಲ್ಲ ಗಂಡು ಮಕ್ಕಳಿಗೇ ಕೊಡುವನು ಎಂದು ನಾರಾಯಣ ಅವಳನ್ನು ಆಗಾಗ ಹೀಸ್ಯೈಸುತ್ತಿದ್ದ. ಇಲ್ಲವಾದರೆ, ನಾನು ಇಷ್ಟು ಕಷ್ಟದಲ್ಲಿದ್ದೇನೆ, ತಲೆಗೆ ಎಳೆದ್ರೆ ಕಾಲಿಗೆ ಬರೋದಿಲ್ಲ, ಕಾಲಿಗೆಳೆದರೆ ತಲೆಗೆ ಸಾಕಾಗೋದಿಲ್ಲ, ನಮ್ಗೆ ಏನಾದ್ರೂ ಸ್ವಲ್ಪ ಸಹಾಯ ಮಾಡೋ ಮನಸ್ಸು ಅವನಿಗಾಗ್ತದೆಯೆ? ಎಂದು ಆಕೆಯನ್ನು ಕೇಳಿದ್ದ. ಆದರೆ ಆಕೆ ತನ್ನ ತಂದೆಯ ಪರವಾಗಿ ಸ್ವಲ್ಪ ವಾದಿಸಿದ್ದಳು.

"ನಮ್ಗೆಕೇ ಅವರ ಹಣ? ಅವರಿಗೂ ಖರ್ಚಿಲ್ಲವೆ? ನನ್ನನ್ನು ಸ್ಕೂಲಿಗೆ ಆರೇಳು ವರ್ಷ ಕಳಿಸಿದರು. ಆಮೇಲೆ ಮದುವೆಯ ಖರ್ಚನ್ನೂ ಅವರೇ ಮಾಡಿದರು. ಇಷ್ಟು ಭಂಗಾರ ಹಾಕಿದ್ದಾರೆ. ಈಗ ಪ್ರವೀಣನಿಗೂ (ಅವಳ ಮಗ) ಖರ್ಚಿಗೆ ಕೊಡುತ್ತಾರೆ. ನಿಮಗೆ, ನೀವು ದುಡಿಯುವುದಿಲ್ಲವೆ?"

ಒಹ್! ನಾನು ದುಡಿದುದು ನನ್ಗಾಗಿ, ನಾರಾಯಣ ಆಗ ಪ್ರತಿವಾದಿಸುತ್ತಿದ್ದ. ಆದ್ರೆ ನನ್ಗೆ ಈ ಮದ್ವೆಯಾದ್ರಿಂದ ಎಷ್ಟೆಲ್ಲ ಕಷ್ಟ, ಎಷ್ಟೆಲ್ಲ ನಷ್ಟವಾಗಿದೆ! ನಾನೊಬ್ಬನೆ ಆಗಿದ್ರೆ ಹೋಟೇಲಲ್ಲೋ ಎಲ್ಲೋ

ಜೀವ್ನ ಮಾಡ್ತಿದ್ವೆ. ಈಗ ನಿನ್ಗೆ ಪುಸ್ತಕಗಳೇನು, ಪತ್ರಿಕೆಗಳೇನು, ನೆಯಿಗೆಯ ನೂಲೂ–ಬಟ್ಟೆಗಳೇನು! ನನ್ಗೆ ಸಿಕ್ಕೋ: ಹಣ ಇದ್ಕೆಲ್ಲ ಸಾಕಾಗ್ತದೆಯೆ ?........"

"ಹಾಗಾದರೆ ನೀವು ಕೇಳಿ ಅವರೊಡನೆ" ಎಂದಿದ್ದಳಾಕೆ.

ಅವನು ಆಗ ಅವಳಿಗೆ ಉತ್ತರ ಕೊಟ್ಟಿರಲಿಲ್ಲ.

ಆದರೆ ಅವನಿಗೆ ತನ್ನ ಮಾವನ ಮೇಲಿದ್ದ ಊಹನೆಗಳೆಲ್ಲ ಆ ಮರಣಶಾಸನದ ಪತ್ರವನ್ನು ಕೇಳಿದ ಬಳಿಕ ಸುಳ್ಳೆಂದು ತೋರಿದ್ದುವು. ತನ್ನ ಹೆಂಡತಿ ತಂದೆಯನ್ನು ಸುಮ್ಮನೆ ಹೊಗಳುತ್ತಿದ್ದಿಲ್ಲ, ಅವನ ಉದಾರ ಗುಣವನ್ನು ಸುಮ್ಮನೆ ಕೊಂಡಾಡುತ್ತಿದ್ದಿಲ್ಲವೆಂದು ಅವನಿಗೆ ತೋರಿತ್ತು.

ಅದು ಒಂದು ದೊಡ್ಡ ಮನೆ ಮತ್ತು ಐದು ಸಾವಿರ ರೂಪಾಯಿಗಳ ಉಡುಗೊರೆ!

ಆ ಎರಡು ದಿನಗಳಲ್ಲಿ ನಾರಾಯಣ ಕಂಡ ಸ್ವಪ್ನಗಳಿಗೆ ಲೆಕ್ಕವಿರಲಿಲ್ಲ. ಅವನ ಹಗಲುಗನಸುಗಳಿಗೆ ಅಂತ್ಯವಾಗಲೀ ಮೇರೆಯಾಗಲೀ ಇರಲಿಲ್ಲ. ತನ್ನ ಮಾವ ಸತ್ತೊಡನೆ ತಾನು ತನ್ನ ಗಾಳಿ ಬಾರದ ಮಳೆಗೆ ಸೋರುವ ಜೋಪಡಿ ಮನೆಯನ್ನು ಬಿಟ್ಟು ಅವನ ಮಹಡಿಯ ಮನೆಯಲ್ಲಿ ರಾಜನಂತೆ ದಿನಗಳೆಯಬಹುದು! ಅಲ್ಲಿ ವಿದ್ಯುಚ್ಛಕ್ತಿಯ ದೀಪಗಳಿವೆ. ನೀರಿಗೆ ನಲ್ಲಿಯಿದೆ. ದೊಡ್ಡ ತೋಟವಿದೆ. ಹಿತ್ತಲಲ್ಲಿ ನೂರಕ್ಕಿಂತಲೂ ಹೆಚ್ಚು ತೆಂಗಿನ ಮರಗಳಿವೆ. ಅಲ್ಲಿಗೆ ಹೋಗಲು ರಸ್ತೆಯಿದೆ. ಎಲ್ಲ ಬಿಟ್ಟು ಈಗ ಖರ್ಚಾಗುವ ತಿಂಗಳ ಮನೆ ಬಾಡಿಗೆ ಐದು ರೂಪಾಯಿಗಳು ಕೂಡಾ ಆಗ ಉಳಿಯುವುವು. ತಾನು ಆ ಮೇಲೆ ಈ ಬಸ್ ಡ್ರೈವರ್ ಕೆಲಸವನ್ನು ಬಿಡಬೇಕು. ಐದು ಸಾವಿರ ರೂಪಾಯಿಗಳನ್ನು ಮುಂಗಡವಾಗಿ ತೆತ್ತರೆ ಒಂದು ಲಾರಿ ಹೇಗಾದರೂ ಸಿಗಬಹುದು. ಇಲ್ಲವಾದರೆ ಹಣಕ್ಕೆ ಒಂದು ಟ್ಯಾಕ್ಸಿಯನ್ನು ಪಡಕೊಳ್ಳಬಹುದು. ಆ ಬಳಿಕ ತನಗೆ ಹೀಗೆ ಹಗಲಿಡೀ ಯಾರದೋ ಬಸ್ಸನ್ನು ಯಾರ್ಯಾರದೋ ಬೈಗಳನ್ನು ಕೇಳುತ್ತ, ನಡೆಸುವ ಪ್ರಮೇಯವಿರಲಿಕ್ಕಿಲ್ಲ. ಬೇಕಾದರೆ ಲಾರಿಯನ್ನು ಬಾಡಿಗೆಗೆ ಕೊಟ್ಟು. ಇಲ್ಲವಾದರೆ ಮನೆಯಲ್ಲೇ

ಅದನ್ನು ತಂದು ನಿಲ್ಲಿಸಿದ. ಟ್ಯಾಕ್ಸಿಯಾದರೂ ಅಷ್ಟೆ. ದಿನಕ್ಕೆ ಹತ್ತು ರೂಪಾಯಿಗಳಷ್ಟಾದರೂ ಸಂಪಾದನೆಯಾಗದಿರಲಿಕ್ಕಿಲ್ಲ. ಈಗಿನಂತೆ ಆಗ ಅನ್ನ ಬಿಟ್ಟು ಎಲ್ಲೆಲ್ಲೋ ತಿರುಗಾಡುವ ಸಂಭವವಿಲ್ಲ. ತನ್ನ ಉತ್ಪತ್ತಿಯು ಹೆಚ್ಚಾಗುವುದಲ್ಲದೆ, ತನ್ನ ಅಂತಸ್ತೂ ಆಗ ಏರುವುದು. ಎಲ್ಲರೂ ತನ್ನನ್ನು ಆಗ ಟ್ಯಾಕ್ಸಿ ಒಡೆಯನೆಂದು ಮರ್ಯಾದಿಸಬಹುದು. ಹೀಗೆ ಉಳಿತಾಯವಾದ ಹಣದಲ್ಲಿ ತಾನು ಮತ್ತು ಲಾರಿಗಳನ್ನೋ ಟ್ಯಾಕ್ಸಿಗಳನ್ನೋ ಪಡೆದು ನೌಕರರನ್ನಿಟ್ಟು ಹಣ ಸಂಪಾದಿಸ ಬಹುದು........!

ಮನೆಯೊಳಗಿನಿಂದ ಅಳುವ ಧ್ವನಿ ಮಾತ್ರ ಕೇಳುತ್ತಿತ್ತು. ಮುತ್ತನೂ ಮುತ್ತನ ಹೆಂಡತಿಯೂ ಅಳತೊಡಗಿದ್ದರು. ನಾರಾಯಣ ಜೀವಂತ ಹೆಣದಂತೆ ಕುಳಿತು ಯೋಚಿಸುತ್ತಿದ್ದ.

ತುಸು ಹೊತ್ತಾಗುವಾಗ ದೂಮನ ದೂರದ ಸಂಬಂಧಿಕರಾದ ದೇಜು ಮತ್ತು ದುಗ್ಗಣ್ಣ ಬಂದರು. ನಾರಾಯಣ ಅವರನ್ನು ಕಂಡು ಎದ್ದುನಿಂತ. ಅವರು ಮಾತಾಡಲಿಲ್ಲ. ಅವನೂ ಮಾತಾಡಲಿಲ್ಲ. ಅವನು ನಿಂತೊಡನೆ ಎದುರಿನ ಕನ್ನಡಿಯಲ್ಲಿ ಅವನ ಪ್ರತಿಬಿಂಬ ಗೋಚ ರಿಸಿತು. ಅದನ್ನೊಮ್ಮೆ ನೋಡಿದ. ಅವನ ಕಣ್ಣು ಕಾದ ಕೆಂಡ ದಂತಾಗಿತ್ತು. ಮುಖದಲ್ಲಿ ಏನೋ ಒಂದು ವಿಲಕ್ಷಣ ಛಾಯೆ ತೋರು ತ್ತಿತ್ತು. ಕೂದಲು ಕೆದರಿ ಅವನು ತನಗೇ ಅಮಾನುಷವಾಗಿ ತೋರು ತ್ತಿದ್ದ.

ಮುತ್ತ ಬಂದು ಬೆಳಕು ಹೆಚ್ಚಿಸಿದ.

"ಇನ್ನೇಕೆ ಕಾಯೋದು? ಕೊಂಡು ಹೋಗೋಣ" ಎಂದು ದೇಜು ವೆಂದ.

ಈಗ ಎಲ್ಲ ತಯಾರಾಗಿದೆ. ಕಟ್ಟಿಗೆಯನ್ನು ಎಲ್ಲ ಸರಿಯಾಗಿ ಮೂಟೆ ಮಾಡಿಸಿದ್ದೇನೆ. ಒಂದು ಡಬ್ಬಿ ಚಿಮಿಣಿ ಎಣ್ಣೆಯನ್ನು ಪಡೆದು ಕೊಂಡು ಹೋಗಿದ್ದೇನೆ. ಇನ್ನೆಲ್ಲಾದರೂ ಮಳೆ ಬಂದರೆ ಕಷ್ಟ" ಎಂದು ದುಗ್ಗಣ್ಣ ಹೇಳಿದ.

ಮುತ್ತ " ಹ್ಞೂಂ " ಎಂದು ಒಳಗೆ ಹೋಗಿ ದೂಮನ ವಸ್ತ್ರಗಳನ್ನೆಲ್ಲ ತಂದ.

"ಕಾಲುಗಳನ್ನೂ ಸೊಂಟವನ್ನೂ ತಲೆಯನ್ನೂ ವಸ್ತ್ರದ ತುಂಡುಗಳಿಂದ ಕಟ್ಟಿಬಿಡು. ಇಲ್ಲವಾದರೆ ಸಿಗಿದ ಹೆಣವಲ್ಲವೆ? ಎಲ್ಲಾದರೂ ಬಿದ್ದು ಬಿಟ್ಟೀತು" ಎಂದು ದೇಜು ಜಾಗ್ರತೆ ಹೇಳಿದ.

ನಾರಾಯಣನಿಗೆ ದೂರ ನಿಲ್ಲಬೇಕೆಂದು ಮನಸ್ಸಿದ್ದರೂ ಈಗ ಹೆಣವನ್ನು ಮುಟ್ಟದೆ ನಿರ್ವಾಹವಿರಲಿಲ್ಲ. ಅದೂ ತಾನು ದೂರದಲ್ಲೇ ನಿಂತುಕೊಂಡರೆ ಅವರೆಲ್ಲ ಏನೆನ್ನುವರೋ ಎಂಬ ಹೆದರಿಕೆ ಬೇರೆ. ಹಾಗೆಯೇ ಅವನು ಮುತ್ತನಿಂದ ನಡುಗುವ ಕೈಗಳಲ್ಲಿ ವಸ್ತ್ರವನ್ನು ತೆಗೆದುಕೊಂಡು ಅವನ್ನು ಮೂರು ತುಂಡು ಮಾಡಿ ಹೆಣದ ಕಾಲಿನ ಬಳಿಗೆ ಹೋಗಿ ವಸ್ತ್ರವನ್ನು ಬಿಗಿಯಾಗಿ ಕಟ್ಟತೊಡಗಿದ. ಒಳಗೆ ಎಲುಬು ಕಟ ಕಟ ಎನ್ನುವ ಶಬ್ದ ಆಗ ಅವನಿಗೆ ಕೇಳುತ್ತಿತ್ತು.

ಮುತ್ತ ಸೊಂಟವನ್ನು ಬಿಗಿಯತೊಡಗಿದ. ಆದರೆ ಅದು ಅಷ್ಟು ಸುಲಭವಾದ ಕೆಲಸವೇನೂ ಆಗಿರಲಿಲ್ಲ. ಹೆಣವನ್ನು ತುಸು ಒತ್ತಿ ಅದರ ಅಡಿಯಿಂದ ವಸ್ತ್ರದ ತುಂಡನ್ನು ತರಬೇಕಿತ್ತು. ಅವನು ಹಾಗೆ ಕಟ್ಟುತ್ತಿದ್ದಾಗಲೇ ನಾರಾಯಣನ ಕಟ್ಟುವ ಕೆಲಸ ಮುಗಿಯಿತು. ಅವನು ಎದ್ದುನಿಂತ. ದೇಜು ಮತ್ತು ದುಗ್ಗಣ್ಣ ಅವನನ್ನೆ ನೋಡಿದರು. ಅವರ ಕಣ್ಣುಗಳಲ್ಲಿ ಏನಾದರೂ ಈಟಿಗಳಿವೆಯೇ ಎಂದು ಅವನಿಗೆ ಭಾಸವಾಯಿತು. ಮುತ್ತ ಇನ್ನೂ ಸೊಂಟದ ಗಂಟನ್ನು ಕಟ್ಟುವುದರಲ್ಲೇ ತಲ್ಲೀನನಾಗಿದ್ದ.

ನಾರಾಯಣನಿಗೆ ಈಗ ಹೆಣದ ಮುಖದ ಬಳಿ ಹೋಗದೆ ಉಪಾಯವಿರಲಿಲ್ಲ. ಹೇಗೋ ಇದ್ದಕ್ಕಿದ್ದ ಹಾಗೆಯೇ ಅದನ್ನು ಕಟ್ಟಿ ಬಿಡೋಣವೆಂದು ಅದರ ತಲೆಯನ್ನೆತ್ತಿದ. ಆದರೆ ಅದು ಜಗ್ಗನೆ ನೆಲದ ಮೇಲೆ ಕಟ ಕಟ ಎನ್ನುತ್ತ ಬಿತ್ತು. ಆಗ ಅದರ ವಸ್ತ್ರವೂ ಸ್ವಲ್ಪ ಬದಿಗೆ ಸರಿಯಿತು. ಅದರ ಕಣ್ಣು ಇನ್ನೂ ತೆರೆದೇ ಇದ್ದುದನ್ನು ನಾರಾಯಣನಿಗೆ ನೋಡಿ ಮೂರ್ಛೆ ಹೋಗುವಂತಾಯಿತು. ಆದರೆ ಅವನು ಸಹಿಸಿಕೊಂಡು ವಸ್ತ್ರದಿಂದ ಪುನಃ ಅದರ ಮುಖವನ್ನು ಮುಚ್ಚಿದ. ಆ ಮೇಲೆ ವಸ್ತ್ರದ ತುಂಡಿನಿಂದ ತಟ್ಟವನ್ನೂ ಬಿಗಿದ.

ಮುತ್ತ ಎದ್ದು ಒಳಗಿಂದ ಧೂಪವನ್ನು ತಂದ. ದುಗ್ಗಣ್ಣ ಲಾಟೀನನ್ನು ಹೊತ್ತಿಸಿ ಹಿಡಿದುಕೊಂಡ.

ಅಷ್ಟರಲ್ಲಿ ನಾರಾಯಣನ ಮಗ ಪ್ರವೀಣನನ್ನೂ ರುಕ್ಕು ಹೊರಗೆ ಕಳಿಸಿದಳು. ಅವನೊಡನೆ ದೇಜು ಹೊಗೆಯೇಳುತ್ತಿದ್ದ ಧೂಪದ ಪಾತ್ರೆಯನ್ನುಕೊಟ್ಟ.

"ಇನ್ನು ಹಿಡಿಯಿರಿ. ನಾರಾಯಣ ಮಧ್ಯದಲ್ಲಿ. ಮುತ್ತ ಕಾಲಿನಲ್ಲಿ. ನಾನು ತಲೆಯನ್ನು ಹೊರುತ್ತೇನೆ," ಎಂದು ದೇಜು ಕೆಳಗೆ ಬಾಗಿದ.

ಮುತ್ತನೂ ಆಗ ಹೋಗಿ ಕಾಲನ್ನೆತ್ತಿದ. ನಾರಾಯಣ ನಡುವನ್ನು ಹಿಡಿದುಕೊಂಡ.

"ಜೋಕೆ! ಎಲುಬೆಲ್ಲ ಮುರಿದಿದೆ. ಅವಸರ ಮಾಡ್ಬೇಡಿ" ಎನ್ನುತ್ತ ದೇಜು ಹೆಣದ ಮುಂಭಾಗವನ್ನು ತನ್ನ ತಲೆಯ ಮೇಲಿಟ್ಟ.

ನಾರಾಯಣ ಮತ್ತು ಮುತ್ತನೂ ಅದನ್ನು ತಲೆಯಲ್ಲಿ ಹೊತ್ತುಕೊಂಡು ಹೊರಟರು. ಪ್ರವೀಣ ಮುಂದಿನಿಂದ ಹೋದ. ದುಗ್ಗಣ್ಣ ಲಾಟೀನನ್ನು ಹಿಡಿದುಕೊಂಡು ಅವರಿಗೆ ದಾರಿ ತೋರಿಸುತ್ತಿದ್ದ.

ನಾರಾಯಣನಿಗೆ ಮೈಯೆಲ್ಲ ಬೆವರಿತು. ಹೆಣ ಹೊರುವ ಕೆಲಸವೇನೂ ಅಷ್ಟೊಂದು ಸುಲಭವಿರಲಿಲ್ಲ. ಮನುಷ್ಯನ ದೇಹದ ಭಾರವು ಸತ್ತ ಬಳಿಕ ಹೆಚ್ಚುವುದೆಂದು ಹೇಳುವುದನ್ನು ಅವನು ಹಿಂದೆ ಕೇಳಿದ್ದ. ಅವನಿಗೆ ಈಗ ಆ ಮಾತು ಸತ್ಯವೆಂದು ತೋರಿತು. ಮುತ್ತ ಬುಸಗುಟ್ಟುತ್ತ ಹಿಂದಿನಿಂದ ಬರುತ್ತಿದ್ದ.

"ಯಾರಿಗಾದರೂ ಭಾರವಾದರೆ ಹೇಳಿ ಬಿಡಿ, ದುಗ್ಗಣ್ಣ ಇದ್ದಾನೆ. ಅವನು ತಲೆ ಕೊಡುತ್ತಾನೆ," ಎಂದು ದೇಜು ಅವರನ್ನು ದಾರಿಯಲ್ಲಿ ಎಚ್ಚರಿಸಿದ.

ನಾರಾಯಣನ ಮನಸ್ಸು ಆಗ ಏನೇನೋ ಯೋಚಿಸುತ್ತಿತ್ತು. ಯೋಚನೆಯ ಒತ್ತಡದಲ್ಲಿ ಹೆಣದ ಭಾರವನ್ನೂ ಅವನು ಮರೆತುಬಿಟ್ಟ. ಒಂದಲ್ಲ ಒಂದು ದಿನ ಎಲ್ಲರೂ ಹೀಗೆಯೇ ಅಂತಿಮಯಾತ್ರೆ ಮಾಡುವವರು ಎಂದು ಅವನಿಗೆ ಕಂಡಿತು. ಈಗ ತನಗೇನೋ ಮಾವನ

ಹಣ ಸಿಗಬಹುದು. ಆದರೆ, ಅದನ್ನು ತಾನು ಎಷ್ಟು ದಿನ ಭೋಗಿಸ ಬಲ್ಲೆ ? ಮಾವನ ಮನೆಯಲ್ಲಿ ತನಗೆ ವಾಸಿಸಲು ಸಾಧ್ಯವಿದೆಯೆ ?

ಇಲ್ಲ, ತಾನು ಮಾವನು ಸಾಯುವನೆಂದು ನಿರೀಕ್ಷಿಸಿರಲಿಲ್ಲ. ಏನೋ ಒಂದಿಷ್ಟು ಜಖಂ ಆಗಿರಬಹುದೆಂದು ನೆನೆಸಿದ್ದೆ. ಮಿಕ್ಕಿದರೆ ಅವನ ಒಂದು ಕಾಲು ತುಂಡಾಗಬಹುದಿತ್ತು. ಇನ್ನೂ ಹೆಚ್ಚೆಂದರೆ ಅವನ ಕೈ ಮೊಟಕಾಗಬಹುದಿತ್ತು........

ಸ್ಮಶಾನ ಬಂತು. ಕಟ್ಟಿಗೆಯ ರಾಶಿ ಅಲ್ಲೇ ಇತ್ತು. ಹೆಣ ವನ್ನು ಅದರ ಮೂರು ಸುತ್ತು ತಂದು ಅದರ ಮೇಲಿಟ್ಟರು. ದೇಜು ಅದಕ್ಕೆ ಕಟ್ಟಿದ ಕಟ್ಟುಗಳನ್ನೆಲ್ಲ ಬಿಚ್ಚಿದ.

ನಾರಾಯಣ ಅಲ್ಲೇ ನಿಂತುಕೊಂಡಿದ್ದ. ಅವನಿಗೆ ತಾನು ಆಗ ನೋಡಿದ ಹೆಣದ ಮುಖವೇ ಇನ್ನೂ ಕಾಣುತ್ತಿತ್ತು. ಆ ಜಜ್ಜಿಹೋದ ಮುಖ, ತುಂಡಾದ ಮೂಗು, ತೆರೆದ ಬಾಯಿ ಮತ್ತೆ .... ಆ ತೆರೆದ ಕಣ್ಣುಗಳು! ಅವನು ಒಮ್ಮೆ ಜೀವಿಸಿ ಬರಲಿ ಎಂದು ಅವನು ಬಲ ವಾಗಿ ಇಚ್ಛಿಸಿದ ....

ಅವನು ಈ ಕಲ್ಪನೆಯ ಭ್ರಮೆಯಿಂದ ಎಚ್ಚರವಾಗಿ ನೋಡು ವಾಗ ಬೆಂಕಿಯ ನಾಲಗೆಗಳು ಮೇಲೆ ಏಳುತ್ತಿದ್ದವು. ಹೆಣವನ್ನು ಅವು ನುಂಗುತ್ತಿರುವಂತೆ ನಾರಾಯಣನಿಗೆ ಭಾಸವಾಯಿತು.

ಅವನ ಮಗ ಪ್ರವೀಣ ಮುತ್ತನೊಡನೆ ನಿಂತುಕೊಂಡಿದ್ದ. ಅವನ ಮುಖವು ಕಪ್ಪಾಗಿತ್ತು. ಕಣ್ಣಿನಿಂದ ನೀರಿಳಿಯುತ್ತಿತ್ತು.

ನಾರಾಯಣ ಒಮ್ಮೆಲೇ ಕಣ್ಣನ್ನು ಮುಚ್ಚಿಕೊಂಡು ಅಲ್ಲೆ ಕುಳಿತು ಕೊಂಡ. ಅವನಿಗೆ ಬೆಂಕಿ ಉರಿಯುವಾಗ ಆಗುತ್ತಿದ್ದ ಚಟ ಚಟ ಶಬ್ದಗಳು ಕೂಡಾ ಕೇಳಿಸಲಿಲ್ಲ.

೪

ಅಂದು ರಾತ್ರಿ ನಾರಾಯಣನಿಗೆ ನಿದ್ದೆ ಹತ್ತಿರಲಿಲ್ಲ. ರುಕ್ಕು ಅವನ ಬದಿಯಲ್ಲೇ ಅಳುತ್ತ ಮಲಗಿದ್ದಳು. ಅವಳ ಉಸಿರು ಅವನ

ಬೆನ್ನಿಗೆ ಸೋಂಕುತ್ತಿತ್ತು. ಅವನು ಅಂದು ಅವಳೊಡನೆ ಮಾತಾಡಿರಲಿಲ್ಲ. ತಾನು ಅವಳನ್ನು ಹೇಗೆ ಮಾತಾಡಿಸಬೇಕೆಂಬುದೂ ಅವನಿಗೆ ತಿಳಿದಿರಲಿಲ್ಲ.

ಅವರಿಬ್ಬರದು ಸಂತೋಷದ ಸಂಸಾರವಾಗಿತ್ತು, ಆ ತನಕ ರುಕ್ಕುವನ್ನು ಅವನು ತುಂಬಾ ಪ್ರೀತಿಸಿದ್ದ. ಆಕೆಯನ್ನು ಅವನು ಮದುವೆಯಾದುದು ಕೇವಲ ಆಕೆಯ ಅಣ್ಣ ಮುಂಡಪ್ಪನ ಒತ್ತಾಯಕ್ಕಾದರೂ, ಮತ್ತೆ ಅವನು ಅದಕ್ಕಾಗಿ ಎಂದೂ ಪಶ್ಚಾತ್ತಾಪ ಪಟ್ಟಿರಲಿಲ್ಲ. ಆಕೆ ಸುಂದರಿಯಷ್ಟೇ ಅಲ್ಲ, ಸುಶಿಕ್ಷಿತೆಯೂ ಆಗಿದ್ದಳು. ಅವಳು ಓದುವುದನ್ನು, ಮಾತಾಡುವುದನ್ನು ಎಲ್ಲ ಕೇಳಿ ಅವನಿಗೆ ತಾನು ಅವಳಿಗೆ ಗಂಡನಾಗಲು ಅರ್ಹನಾಗಿಲ್ಲವೆಂದು ಹಲವು ಬಾರಿ ತೋರಿತ್ತು. ಆದರೆ ಆಕೆಯೆಂದೂ ಅವನನ್ನು ತನಗೆ ಅಯೋಗ್ಯನೆಂದು ಭಾವಿಸಿರಲಿಲ್ಲ. ಅವಳು ಅವನನ್ನು ಎಷ್ಟು ಅಧಿಕವಾಗಿ ಪ್ರೀತಿಸುತ್ತಿದ್ದಳೋ, ಅಷ್ಟೇ ಹೆಚ್ಚಾಗಿ ಅವನನ್ನು ಮರ್ಯಾದಿಸುತ್ತಿದ್ದಳು. ಅವನು ಕೇವಲ ಬಸ್ಸಿನ ಡ್ರೈವರ, ತನ್ನಷ್ಟು ಶಿಕ್ಷಣ ಪಡೆದವನಲ್ಲ, ಅವನ ನಡೆನುಡಿಗಳು ಒರಟಾದವುಗಳು— ಹೀಗೆಂದು ಅವಳು ಅವನನ್ನು ಎಂದೂ ಹೀನೈಸಿದ್ದಿಲ್ಲ, ತುಚ್ಛೀಕರಿಸಿದ್ದಿಲ್ಲ.

ಅವನಿಗೆ ಕೆಲವು ಸಲ ಅವಳ ಆಕರ್ಷಣೀಯ ದೇಹದ ಅಚ್ಚುಕಟ್ಟನ್ನು ನೋಡುವಾಗ ತನ್ನಂಥವನಿಗೆ ಏಕಾಗಿ ಅವಳನ್ನು ಕೊಟ್ಟುಬಿಟ್ಟರೆಂದು ಆಶ್ಚರ್ಯಪಟ್ಟಿದ್ದ. ಅವಳ ತಂದೆ ಐಶ್ವರ್ಯವಂತ, ಅವಳ ಅಣ್ಣ ಮುಂಡಪ್ಪ ಒಳ್ಳೆಯ ಬುದ್ಧಿವಂತ! ತನ್ನಲ್ಲಿ ಎರಡೂ ಇಲ್ಲ. ತಾನು ಕೇವಲ ಮುಂಡಪ್ಪನಿಂದಲೇ ಇಷ್ಟು ಮೇಲೆಯಾದರೂ ಬಂದವ. ಆದರೂ ತನ್ನ ಮೇಲೆ ಅವರಿಗೆ ಎಷ್ಟು ಅಭಿಮಾನವಿದೆ! ತನ್ನನ್ನು ಅವರು ಎಷ್ಟು ಓಲೈಸುತ್ತಾರೆ! ಹೀಗೆಂದು ಆಗಾಗ ಅವನು ಯೋಚಿಸಿದ್ದ.

ಈ ಹೆಂಗಸು ರುಕ್ಕು ಮಾತ್ರವಲ್ಲ, ಅವಳ ತಂದೆ, ಅಣ್ಣಂದಿರು ಎಲ್ಲರೂ ಬಹಳ ಮೃದು ಹೃದಯಿಗಳು. ಅವರ ಪ್ರೀತಿಗೆ ಮೇರೆಯಿಲ್ಲ, ಮಿತಿಯಿಲ್ಲ. ಅವರದು ಹಾರ್ದಿಕ ಮಮತೆ. ಭೇದಬುದ್ಧಿಯನ್ನೆಂದೂ ಅವರು ಅರಿಯರು. ಅವರ ಮಾತಿನಲ್ಲೇ ಒಂದು ವಿಶಿಷ್ಟ ಶಕ್ತಿಯಿದೆ!

ಅವರ ಧ್ವನಿ ಕಿವಿಯನ್ನು ಸೇರುವುದಿಲ್ಲ. ಹೃದಯವನ್ನು ಸೇರುವುದು, ನಾಡಿನಾಡಿಗಳನ್ನು ಸ್ಪರ್ಶಿಸುವುದು. ಅವರ ಆತಿಥ್ಯವೆಂಪರೆ ಅದು ಕೇವಲ ನಾಲಿಗೆಯ ರುಚಿಗಾಗಿ ಉಪಚಾರವಲ್ಲ. ಅದರೊಡನೆ ಮನಸ್ಸಿಗೆ ತೃಪ್ತಿಯನ್ನುಂಟುಮಾಡುವ ಒಂದು ಅಮೋಘ ಗುಣವಿದೆ. ತನಗೂ ಅವರಿಗೂ ಇದೊಂದು ದೊಡ್ಡ ಭೇದವಿದೆಯೆಂಬುದುದನ್ನು ನಾರಾಯಣ ಹಿಂದೆಯೆ ತಿಳಿದಿದ್ದ. ತನಗೆ ಅಷ್ಟು ಆಳವಾಗಿ ಯಾರನ್ನೂ ಪ್ರೀತಿಸಲು ಸಾಧ್ಯವಿಲ್ಲವೆಂದು ತನ್ನನ್ನು ತಾನೇ ಹಳಿದೂ ಇದ್ದ. ಒಂದು ವೇಳೆ ಅವರು ತನ್ನಂಥ ಕೀಳು ಮಟ್ಟದವರಾಗಿದ್ದು ತಾನು ಅವರಷ್ಟು ಅನುಕೂಲವಂತನಾಗಿದ್ದಲ್ಲಿ, ಅವರಷ್ಟು ಅನ್ಯೋನ್ಯವಾಗಿ ತನಗೆ ನಡೆದುಕೊಳ್ಳಲು ಎಂದೂ ಸಾಧ್ಯವಾಗುತ್ತಿದ್ದಿಲ್ಲ ಎಂದು ಅವನಿಗೆ ಎಷ್ಟೋ ವೇಳೆ ಕಲ್ಪನೆಯಾಗಿತ್ತು. ಅವರ ಒಡನಾಟದಲ್ಲಿ ಅವನ ಒರಟು ಭಾವನೆಗಳು ಬಹಳ ಸುಧಾರಿಸಿದ್ದುವು. ಅವನಲ್ಲೂ ಸೌಜನ್ಯ ಮತ್ತು ಸಹೃದಯತೆಗಳು ಜೀವ ತಾಳಿದ್ದುವು.

ನಾರಾಯಣನಿಗೆ ತನ್ನ ಹಿಂದಿನ ದಿನಗಳ ಸ್ಮರಣೆ ಬಂತು. ಅವನು ಹಳ್ಳಿಯಲ್ಲಿ ಹುಟ್ಟಿದವ. ತಂದೆ ಬೇಸಾಯಗಾರ. ನಾರಾಯಣನನ್ನು ನಾಲ್ಕೈದು ವರ್ಷ ಸಾಲೆಗೆ ಕಳಿಸಿದ್ದರೂ ಅವನು ಕಲಿತುದು ಬಹಳ ಕಡಿಮೆ. ಓದಲಿಕ್ಕೇನೋ ಬರುತ್ತಿತ್ತು. ಆದರೆ ಬರೆಯಲು ಬಹಳ ಕಷ್ಟವಾಗುತ್ತಿತ್ತು. ಅವನು ಬರೆದುದನ್ನು ಇತರರಿಗೆ ಓದಲೂ ಆಗುತ್ತಿರಲಿಲ್ಲ. ಮತ್ತೆ ಸಾಲೆಬಿಟ್ಟಾದ ಬಳಿಕ ದನ ಮೊದಲಾದ ಜಾನುವಾರುಗಳನ್ನು ಮೇಯಿಸುವ ಕೆಲಸ ಅವನಿಗಾಯಿತು. ಬೆಳಗ್ಗೆ ಒಂದಿಷ್ಟು ತಂಗಳನ್ನ ಉಂಡು ಹಟ್ಟಿಯಿಂದ ಅವುಗಳನ್ನು ಮೇಯಿಸಲಿಕ್ಕೆ ಕೊಂಡು ಹೋದರೆ ಮತ್ತೆ ಹಿಂದೆ ಬರುವುದು ಮಧ್ಯಾಹ್ನ ಊಟಕ್ಕೆಮಾತ್ರ. ಆ ಬಳಿಕ ಸಂಜೆಗೆ ಅವುಗಳನ್ನು ಹಿಂದೆ ತರಲು ಹೋಗಬೇಕಿತ್ತು. ಈ ಮಧ್ಯೆ ಬೇಸಾಯದ ಸಮಯದಲ್ಲಿ ಅವನಿಗೆ ಉಳುವ ಕೆಲಸವೂ ಸಿಗದಿಲ್ಲ.

ಜಾನುವಾರುಗಳನ್ನು ಮೇಯಿಸುವ ಕೆಲಸವೇನಾದರೂ ಸುಲಭದ್ದಲ್ಲ. ಅವುಗಳಲ್ಲಿ ಎಮ್ಮೆಗಳಿರುವುವು, ಕೋಣಗಳಿರುವುವು, ಎತ್ತುಗಳಿರುವುವು, ದನಗಳಿರುವುವು, ಅವುಗಳಲ್ಲೂ ಸಣ್ಣ ಕರುಗಳು, ಬೀಜ ತೆಗೆಯದ

ಹೋರಿಗಳು,ಹಾಯುವ ಕೋಣಗಳು ಇಲ್ಲದಿಲ್ಲ. ಕರುಗಳು ಒಮ್ಮೆ ಗುಡ್ಡೆ ಯಲ್ಲಿ ಓಡತೊಡಗಿದುವೆಂದರೆ ಮತ್ತೆ ಅವುಗಳನ್ನು ಹಿಡಿದು ತರುವುದು ಬಹಳ ಕಷ್ಟ. ಹೋರಿಗಳು ದನಗಳನ್ನುಹಿಂಬಾಲಿಸಿ ಗುಡ್ಡದಿಂದ ಗುಡ್ಡಕ್ಕೆ ಅಲೆದಾಡತೊಡಗಿದುವೆಂದರೆ ಅವುಗಳ ಪತ್ತೆ ಹಚ್ಚಲು ದಿನಗಳು ಮತ್ತೆ ಬೇಕು. ಕೋಣಗಳೂ, ಎಮ್ಮೆಗಳೂ, ಒಮ್ಮೊಮ್ಮೆ ತಮ್ಮನ್ನು ಕಾಯುವವನನ್ನು ಓಡಿಸಿಕೊಂಡು ಬರುವುವು. ಮತ್ತೆ ಅವೆಲ್ಲಾದರೂ ಹಳ್ಳಕ್ಕಿಳಿದವೆಂದರೆ ತೀರಿತು. ಎಷ್ಟು ಪೆಟ್ಟು ಹೊಡೆದರೂ ಅವು ಏಳಲಾ ರವು. ಅಲ್ಲದೆ ದನ ಕಾಯುವವನು ದನಗಳ ಮತ್ತು ಎಮ್ಮೆಗಳ ದೊಡ್ಡ ಕರುಗಳು ತಮ್ಮ ತಾಯಂದಿರ ಮೊಲೆಯುಣ್ಣದಂತೆ ನೋಡುತ್ತಿರಬೇಕು. ಮತ್ತೆ ಹುಲಿ ಮುಂತಾದ ಕಾಡು ಮೃಗಗಳ ಹಾವಳಿ ಹೇಳಿತೀರದು. ಹಗಲಲ್ಲೇ ಅವುಗಳು ಜಾನುವಾರುಗಳ ಮೇಲೆ ಬಿದ್ದು ಅವನ್ನು ಕೊಂದು ತಿನ್ನುವುವು. ಆಗ ಉಳಿದ ಜಾನುವಾರುಗಳು ಎಲ್ಲೊ ಪಲಾಯನ ಮಾಡುವುವು. ದನಕಾಯುವ ಹುಡುಗನೂ ತನ್ನ ಜೀವ ಉಳಿಯಬೇ ಕಾದರೆ ಎಲ್ಲಿಗಾದರೂ ಓಡಲೇಬೇಕು. ಬೆಳೆಯ ಸಮಯದಲ್ಲಂತೂ ದನ ಕಾಯುವ ಹುಡುಗರ ಮೇಲೆ ಜವಾಬುದಾರಿ ಬಹಳ ಹೆಚ್ಚು. ಕೆಲವು ಜಾನುವಾರುಗಳು ತಪ್ಪಿಸಿಕೊಂಡು. ಗದ್ದೆಯಲ್ಲಿದ್ದ ಪೈರನ್ನು ತಿನ್ನುವುದ ರಲ್ಲಿ ನಿಸ್ಸೀಮವಾದವುಗಳು.ಅವುಗಳಿಗೆ ಯಾವರೀತಿಯ ಬೇಲಿ ಮುಂತಾದ ಅವರಣಗಳೂ ತಡೆಯಲ್ಲ. ಕೇವಲ ಒಂದೆರಡು ಗಂಟೆಗಳ ಅವಧಿಯಲ್ಲಿ ಗದ್ದೆಯ ಅರ್ಧ ಪೈರನ್ನು ತಿನ್ನಬಲ್ಲ ಜಾನುವಾರುಗಳಿವೆ. ಅಂಥ ಪ್ರಮಾದ ಸಂಭವಿಸುವಾಗ ದನ ಕಾಯುವ ಹುಡುಗನಿಗೆ ಮನೆಯವರಿಂದ ಏಟು ಕೂಡಾ ಬೀಳದಿಲ್ಲ. ಆದರೂ ಬೇಸಾಯಗಾರರ ಮಕ್ಕಳಿಗೆ ಈ ಕೆಲಸವು ಅನುವಂಶಿತವಾಗಿ ತಮ್ಮ ವೃತ್ತಿಯ ಪೀಠಿಕೆಯಾಗಿ ಒದಗಿಯೇ ಒದಗುವುದು. ಆ ಮಕ್ಕಳು ಈ ಕಠಿನ ವಾಸ್ತವಿಕತೆಯ ವಾತಾವರಣ ದಿಂದ ತಪ್ಪಿಸಿಕೊಳ್ಳಲಿಕ್ಕಾಗಿ ಮೂಗಿನಲ್ಲಿ ಊದುವ ಕೊಳಲನ್ನು ತಯಾ ರಿಸಿ ಅವನ್ನು ಊದುವರು, ಬೊಗರಿಯನ್ನು ತಯಾರಿಸಿ ಅದನ್ನು ತಿರುಗಿ ಸುವರು. ಗೇರುಬೀಜವಾಗುವ ಸಮಯದಲ್ಲಿ ಗೇರು ಬೀಜಗಳ ಸಂಗ್ರಹ

ಮಾಡುವರು. ಹೆಚ್ಚಾಗಿ ಅವರೆಲ್ಲರೂ ಒಂದೆಡೆ ಕಲೆತು ಆಟವಾಡುವರು. ಅದನ್ನು ಮನೆಯವರು ಕಂಡರೆ ಅವರಿಗೆ ಹೊಡೆಯದಿಲ್ಲ.

ನಾರಾಯಣ ತನ್ನ ಜೀವನದ ಈ ಘಟ್ಟವನ್ನು ಅಷ್ಟೊಂದು ಗಂಭೀರವಾಗಿ ಕಳೆದಿರಲಿಲ್ಲ. ಪ್ರಾರಂಭದಲ್ಲಿ ಸ್ವಲ್ಪ ಸಮಯ ಇದು ಅವನಿಗೆ ಬೇಸರಿಕೆಯನ್ನು ತಂದಿದ್ದರೂ ಮತ್ತೆ ಅವನು ಈ ಕೆಲಸದ ಗುಟ್ಟನ್ನರಿತ. ಹಾಗೆಯೇ ಮನೆಯಿಂದ ಒಮ್ಮೆ ಜಾನುವಾರುಗಳೊಡನೆ ಹೊರಬಿದ್ದರಾಯಿತು. ಅವನ್ನು ಎಲ್ಲೋ ಬಿಟ್ಟು ಅವನು ನೇರವಾಗಿ ಪೇಟೆಯ ದಾರಿಯನ್ನು ಹಿಡಿಯುತ್ತಿದ್ದ. ಅವನ ಸಹೋದ್ಯೋಗೀ ಗೆಳೆಯರು ಅವನಿಗೆ ಬೀಡಿ ಸೇದುವ ಅಭ್ಯಾಸವನ್ನು ಕಲಿಸಿದ ಬಳಿಕಂತೂ ಅವನು ದನ ಮೇಯಿಸುವ ಹೆಸರಿನಲ್ಲಿ ಪೇಟೆಯಲ್ಲೇ ಇರುತ್ತಿದ್ದ. ಆಗ ಅವನಿಗೆ ಚಹದ ರುಚಿಯೂ ಸ್ವಲ್ಪ ಹಿಡಿಯಿತು. ಮನೆಯಿಂದ ಆಗಾಗ ಅಕ್ಕಿ, ಹೆಸರು, ಉದ್ದುಮುಂತಾದುವುಗಳನ್ನು ಕದ್ದು ಮಾರಾಟ ಮಾಡುತ್ತಿದ್ದ. ದಾಲಚೀನಿ ಹೂಬಿಡುವ ಸಮಯದಲ್ಲಿ ದಾಲಚೀನಿ ಹೂವನ್ನು ಒಣಗಿಸಿ ಮಾರುತ್ತಿದ್ದ. ಗೇರು ಬೀಜದ ಸಮಯದಲ್ಲಿ ಹತ್ತಿಪ್ಪತ್ತು ಸೇರು ಗೇರು ಬೀಜವನ್ನು ಸಂಗ್ರಹಿಸಿ ಮಾರಾಟಮಾಡುತ್ತಿದ್ದ. ಮತ್ತೆ ಮತ್ತೆ ಚಹ ಕುಡಿಯದಿದ್ದರೆ ಅವನಿಗೆ ನಿದ್ರೆಯೇ ಬಾರದಂತಾಗುತ್ತಿತ್ತು. ಬೀಡಿ ಸೇದದಿದ್ದರೆ ದೇಹದಲ್ಲಿ ಚೈತನ್ಯವೇ ಇಲ್ಲದಂತಾಗುತ್ತಿತ್ತು.

ಅಷ್ಟರಲ್ಲಿ ಅವನಿಗೆ ಮೋಟರ್ ಕ್ಲೀನರ ಮುಂಡಪ್ಪನ ಪರಿಚಯವಾಯಿತು. ಮುಖ್ಯವಾಗಿ ಮುಂಡಪ್ಪನಿಗೂ ಹುಡುಗನೊಬ್ಬನ ಅವಶ್ಯಕತೆ ಆಗ ಇತ್ತು. ಬಸ್ಸನಿಂತ ಬಳಿಕ ಅದನ್ನು ತೊಳೆಯಬೇಕು. ನೀರನ್ನು ಬಾವಿಯಿಂದ ಎತ್ತಬೇಕಷ್ಟೆ. ಈ ಕೆಲಸದಲ್ಲಿ ನಾರಾಯಣನಿಗೂ ತುಂಬಾ ಆಸಕ್ತಿ ಇತ್ತು.

ನಾರಾಯಣ ಹಲವು ಬಾರಿ ಬಸ್ಸನ್ನು ನಡೆಸುವ ಕೆಲಸ ಕಲಿಯಬೇಕೆಂದು ನೆನೆಸಿದ್ದ. ಆದರೆ ಅವನಿಗೆ ಅದಕ್ಕೆ ಅವಕಾಶವಿದ್ದಿಲ್ಲ. ಬಸ್ಸುಗಳ ಚಲಾವಣೆ ಆಗತಾನೇ ಆರಂಭವಾದುದು. ಅದು ಎಲ್ಲರ ಕುತೂಹಲವನ್ನು ಆಗ ಸೆಳೆದಿದ್ದಿತು. ಅದರ ಶಬ್ದ, ಅದರ ಹಾರ್ನು, ಅದನ್ನು ನಡೆಸುವ ಭಂಗಿ—ಇವನ್ನೆಲ್ಲ ಅನುಕರಿಸದ ಮಕ್ಕಳು ಆಗ ತೀರ ಕಡಿಮೆ.

ಸಾಲೆಗೆ ಹೋಗುವಾಗ ಕೂಡ ಮಕ್ಕಳು ಪೋಪ್ಪ್ಯೊಂಯ್ ಪ್ಪೋ ಪ್ಪೋಂಯ್, ಬೀಂ ಬೀಂ, ಡ್ರ್ ಡ್ರ್ ಎಂದು ಬಾಯಿಯಲ್ಲಿ ಸದ್ದು ಮಾಡುತ್ತ, ಕೈಗಳನ್ನು ಕಾಲ್ಪನಿಕ ಚುಕ್ಕಾಣಿ ಚಕ್ರದಲ್ಲಿ ಹಿಡಿದುಕೊಂಡು ಓಡುತ್ತಿದ್ದವು. ದೊಡ್ಡವರಿಗೂ ಬಸ್ಸೆಂದರೆ ದೊಡ್ಡ ಆಕರ್ಷಣೆಯ ವಸ್ತುವಾಗಿತ್ತು. ಅದರಲ್ಲಿ ಪ್ರಯಾಣ ಮಾಡುವವರ ಸಂಖ್ಯೆ ಕಡಿಮೆಯಾಗಿದ್ದರೂ ಅದು ಬಂದೊಡನೆ ಒಮ್ಮೆ ಅದರ ಬಳಿಗೆ ಎಲ್ಲರೂ ಹೋಗುತ್ತಿದ್ದರು. ಅದನ್ನು ನಡೆಸುವ ಯಂತ್ರದ ಭಾಗಗಳನ್ನು ಸೂಕ್ಷ್ಮವಾಗಿ ಪರಿಶೀಲಿಸುತ್ತಿದ್ದರು. ಒಂದುವೇಳೆ ಅದರ ಎದುರಿನ ಬೋನೆಟನ್ನು ತೆರೆದರಂತೂ ಅಲ್ಲಿ ನೆರೆಯುವ ಜನರಿಗೆ ಲೆಕ್ಕವಿಲ್ಲ. ಅದರೊಳಗೆ ತಿರುಗುವ ಫ್ಯಾನ್, ಅದರ ಕಿಡಿ ಹಾರಿಸುವ ಪ್ಲಗ್‌ಗಳು ಇವೆಲ್ಲ ಅವರಿಗೆ ಅತ್ಯಂತ ಆಶ್ಚರ್ಯಕರವಾಗಿ ಕಾಣುತ್ತಿದ್ದವು.

ಎಲ್ಲಕ್ಕಿಂತಲೂ ಹೆಚ್ಚಿಗೆ ಜನರ ಗಮನವನ್ನು ಸೆಳೆಯುತ್ತಿದ್ದವರೆಂದರೆ ಬಸ್ಸಿನ ಡ್ರೈವರ ಮತ್ತು ಕ್ಲೀನರ. ಅವರಿಬ್ಬರೂ ಬಸ್ಸಿನೊಡನೆ ಪ್ರಯಾಣ ಮಾಡುವವರು. ದಿನವೂ ಜಿಲ್ಲೆಯ ಮುಖ್ಯ ಪಟ್ಟಣವಾದ ಮಂಗಳೂರಿಗೆ ಹೋಗಿ ಬರುವವರು. ಅವರ ಆಗಿನ ಠೀವಿಯನ್ನು ಹೇಳಿ ಪ್ರಯೋಜನವಿಲ್ಲ. ಇಡೀ ಜಿಲ್ಲೆಯಲ್ಲೇ ಕೇವಲ ಹತ್ತಾರು ಮಂದಿ ಅಧಿಕೃತ ಮೋಟರು ನಡೆಸುವವರು. ಆ ಯಂತ್ರದ ರಹಸ್ಯಗಳೆಲ್ಲ ಅವರಿಗೇ ಗೊತ್ತು. ಒಂದು ಗುಂಡಿಯನ್ನು ಮುಟ್ಟಿದೊಡನೆ ಮೋಟರು ಶಬ್ದ ಮಾಡುವುದು. ಇನ್ನೊಂದನ್ನು ಮುಟ್ಟಿದೊಡನೆ ಬೆಳಕು ಬೀಳುವುದು. ಒಂದು ಸರಳನ್ನು ಹಿಂದಕ್ಕೆಳೆದಾಗ ಮೋಟರು ಚಲಿಸುವುದು. ಮೋಟರಿನ ಡ್ರೈವರ ಸ್ಟಿಯರಿಂಗ್ ಚಕ್ರವನ್ನು ಅಟ್ಟಹಾಸದ ಭಂಗಿಯಿಂದ ಚಮತ್ಕಾರವಾಗಿ ತಿರುಗಿಸುವನು. ಪ್ರಯಾಣಿಕರಿಗೆ ಕೂಡ ಅವನ ಕೆಲಸದಮೇಲೆ ಅಸೂಯೆ ಬಾರದಿರದು. ಮತ್ತೆ ಚಿಕ್ಕ ಹುಡುಗರಿಗಂತೂ ಮೋಟರು ನಡೆಸುವ ನೌಕರರೆಂದರೆ ದೊಡ್ಡ ನಾಯಕರೇ ಸರಿ. ಅವರಲ್ಲಿ ಯಾರಾದರೊಬ್ಬರೊಡನೆ ಡ್ರೈವರ್ ಅಥವಾ ಕ್ಲೀನರ್ ಮಾತಾಡಿದನೆಂದರೆ ಸಾಕು. ಸಾಲೆಯಲ್ಲೆಲ್ಲ ಆ ಸುದ್ದಿ ಹರಡುವುದು. ಎಲ್ಲಾದರೂ ಒಬ್ಬ ಹುಡುಗನನ್ನು ಡ್ರೈವರನ ಸೀಟಿನಲ್ಲಿ

ಕುಳಿತು ಅಲ್ಲಿದ್ದ ಯಂತ್ರ ಭಾಗಗಳನ್ನು ಮುಟ್ಟಲು ಬಿಟ್ಟರಂತೂ ಆ ಹುಡುಗನಿಗಾಗುವ ಆನಂದ ಹೇಳಿತೀರದು. ಆ ಮಕ್ಕಳಿಗೆ ಇಂಥಿಂಥಾ ಸಮಯಕ್ಕೆ ಇಷ್ಟಿಷ್ಟು ನಂಬರಿನ ಬಸ್ಸು ಬರುವುದು, ಅದರ ಡ್ರೈವರ ಇಂಥವ, ಕಂಡಕ್ಟರ ಇಂಥವ ಇತ್ಯಾದಿ ಎಲ್ಲಾ ಮಾಹಿತಿಗಳು ತಿಳಿದಿರುತ್ತಿದ್ದುವು.

ನಾರಾಯಣನಿಗೆ ಆಗ ಮುಂಡಪ್ಪನ ಮೊದಲ ಸಂಪರ್ಕವಾದ ಸನ್ನಿವೇಶದ ನೆನಪಾಯಿತು—

ಆಗ ನಾರಾಯಣನೊಡನೆ ಇದ್ದುದು ಒಂದು ಹರಕು ವಸ್ತ್ರದ ಲಂಗೋಟಿ ಮತ್ತು ಒಂದು ಕೊಳಕು ಮೈ ಬಟ್ಟೆಮಾತ್ರ. ಕ್ಷೌರ ಮಾಡಿಸುವುದು ಮೂರುತಿಂಗಳಿಗೊಂದಾವರ್ತಿ. ಅದೂ ತಲೆಯ ಮಧ್ಯದಲ್ಲಿ ಉದ್ದವಾದ ಕೂದಲುಗಳ ಜುಟ್ಟು ಇತ್ತು. ಕಾಲಿನಲ್ಲಿ ಹರಕೆಯ ಒಂದು ಬಳೆಯಿತ್ತು. ಒಂದು ಕೈಯಲ್ಲಿ ಒಂದು ಕೋಲು. ಇನ್ನೊಂದು ಕೈಯಲ್ಲಿ ಮೂಗಿನಲ್ಲಿ ಊದುವ ಕೊಳಲು. ಬಸ್ಸು ಬಂದೊಡನೆಯೇ ಅದರ ಸುತ್ತು ಬಂದು ಒಳಗೆ ಇಣಿಕಿ ನೋಡುವುದು ಅವನ ಅಭ್ಯಾಸವಾಗಿತ್ತು. ಕೆಲವೊಮ್ಮೆ ಮುಂಡಪ್ಪ ಏನಾದರೂ ಸಾಮಾನನ್ನು ಅಂಗಡಿಗೆ ಹೊರಲು ಅವನೊಡನೆ ಹೇಳುವುದಿತ್ತು. ಅದಕ್ಕೆ ಪ್ರತಿಫಲವಾಗಿ ಬೀಡಿಗಳನ್ನೋ ಕೆಲವೊಮ್ಮೆ ಚಹವನ್ನೋ ಅವನು ಕೊಡುತ್ತಿದ್ದ.

ಒಂದುದಿನ ಮುಂಡಪ್ಪ ನಾರಾಯಣನೊಡನೆ ಬಾವಿಯಿಂದ ನೀರು ತರಲು ಹೇಳಿದ. ನಾರಾಯಣ ಓಡಿಹೋಗಿ ಕೊಡದಲ್ಲಿ ನೀರು ತಂದ.

"ನಿನಗೆ ಇದನ್ನು ತೊಳೇಲಿಕ್ಕೆ ತಿಳಿಯುವುದೆ?" ಎಂದು ಮುಂಡಪ್ಪ ಅವನೊಡನೆ ಕೇಳಿದ.

"ಒಹ್! ಏನಾಗ್ಬೇಕು? ವಸ್ತ್ರಕೊಡಿ" ಎಂದು ನಾರಾಯಣ ಉತ್ತರಿಸಿದ.

"ಹಾಗಾದ್ರೆ ಅಗೋ ಅಲ್ಲಿ ಬಾಲ್ದಿಯಿದೆಯಲ್ಲ? ಅದ್ರಲ್ಲಿ ನೀರು ತುಂಬಿಸಿ ಚಕ್ರಗಳನ್ನು ತೊಳೆ. ನಾನು ಕೆಳಗೆ ತೊಳೆಯುತ್ತೇನೆ"

ಸರಿ. ನಾರಾಯಣನಿಗೆ ಅಂದಿನಿಂದ ಈ ಕೆಲಸ ಹಿಡಿದುಹೋ

ಯಿತು. ಬಹಳ ದಿನಗಳ ತನಕ ಅವನ ಮನೆಯವರಿಗೂ ಈ ಸಂಗತಿ ತಿಳಿದಿರಲಿಲ್ಲ. ಜಾನುವಾರುಗಳನ್ನೇನೋ ಗುಡ್ಡೆಗೆ ಕೊಂಡುಹೋಗು ತ್ತಿದ್ದ. ಕತ್ತಲೆಯಾಗುವಾಗ ಅವನು ಅವುಗಳನ್ನು ಹಿಂದೆ ಹೊಡೆದು ಕೊಂಡು ಬರುತ್ತಿದ್ದ. ಆದರೆ ಕೆಲವೊಮ್ಮೆ ಜಾನುವಾರುಗಳು ಕಾಣೆ ಯಾಗುತ್ತಿದ್ದವು. ಕೆಲವನ್ನು ಹುಲಿಗಳು ಹಿಡಿದವು. ಕೆಲವು ಪೈರು ಗಳನ್ನು ನಾಶಮಾಡತೊಡಗಿದವು. ಇಷ್ಟಾಗುವಾಗ ಮನೆಯವರಿಗೆ ಹೇಗೋ ಅವನು ಅಸಡ್ಡೆ ಮಾಡುತ್ತಿದ್ದನೆಂದು ತಿಳಿಯಿತು. ಅವನ ತಂದೆ ಅವನಿಗೆ ಚೆನ್ನಾಗಿ ಒಂದೆರಡು ಸಲ ಹೊಡೆದ. ಆದರೆ ನಾರಾಯಣನಿಗೆ ಮುಂಡಪ್ಪನ ಸ್ನೇಹವನ್ನು ಬಿಡಲಾಗಲಿಲ್ಲ. ಮನೆಯವರ ಕಣ್ಣು ತಪ್ಪಿಸಿ ಕೊಂಡು ಹೇಗೋ ಅವನು ಮೋಟರು ತೊಳೆಯುವ ವೇಳೆಗೆ ಅವನು ಅಲ್ಲಿ ಸಿದ್ಧನಾಗುತ್ತಿದ್ದ. ಮೋಟರು ತೊಳೆಯುವ ಕೆಲಸವಲ್ಲದೆ ಕೆಲ ವೊಮ್ಮೆ ಅವನಿಗೆ ಮೋಟರಿನ ಯಂತ್ರವನ್ನು ತಿಕ್ಕಿ ಶುಚಿಮಾಡುವ ಕೆಲ ಸವೂ ಇರುತ್ತಿತ್ತು. ಬರಬರುತ್ತ ಅದರ ಕೆಲವು ಭಾಗಗಳ ಹೆಸರನ್ನು ಕಲಿತ.

"ನೀನು ಬಸ್ಸಿನ ಕೆಲ್ಸಕ್ಕೆ ಸೇರುವಿಯೋ?" ಎಂದು ಮುಂಡಪ್ಪ ಒಂದುದಿನ ಅವನೊಡನೆ ಕೇಳಿದ.

"ಒಹ್! ಅದ್ಕೇನು? ಆದ್ರೆ ಯಾರು ಕೆಲಸಕೊಡೋವ್ರು?" ಎಂದ ನಾರಾಯಣ.

"ಕೆಲ್ಸ ಕೊಡುವಹಾಗೆ ನಾ ಮಾಡ್ತೇನೆ. ಆದ್ರೆ ನಿನ್ನ ಮನೆ ಯೋರು ಏನಾದ್ರೂ ಅಡ್ಡಿ ಮಾಡಿದ್ರೆ? ನೀನು ಅವ್ರೊಡನೆ ಕೇಳ್ಬೇಕು ಅಮೇಲೆ ನೋಡೋಣ."

"ಅವ್ರೇನು ಮಾಡ್ಲಿಕ್ಕಿಲ್ಲ", ತುಸು ಹೊತ್ತಿನ ಬಳಿಕ ನಾರಾಯಣ ನೆಂದ.

"ನೀವು ಕೆಲ್ಸ ಮಾಡಿಕೊಟ್ರೆ ನಾ ಖಂಡಿತ ಮಾಡ್ತೇನೆ."

"ಮಂಗ್ಳೂರಲ್ಲಿ ಧನಿ ಒಬ್ಬ ಕ್ಲೀನರ್ ಬೇಕೆಂದಿದ್ದಾರೆ. ನೀನೇ ಆದೀತು. ನಾ ಡ್ರೈವರ್ ಆಗ್ತೇನೆ ಒಂದ್ನೇ ತಾರೀಕಿನಿಂದ."

"ನೀವು ಡ್ರೈವರ್ ಆಗ್ತೀರಾ? ನೀವು ಯಾವಾಗ ಇದನ್ನು

ಕಲ್ತೀರಿ? ನಿಮ್ಮೊಟ್ಕೆ ಬೇಕಾದ್ರೆ ಕ್ಲೀನರ್ ಆಗ್ತೀನೆ."

ಇದಾದ ಒಂದೆರಡು ದಿನಗಳಲ್ಲೇ ಅವನು ನಾರಾಯಣನ ಮನೆಗೆ ಅನಿರೀಕ್ಷಿತವಾಗಿ ಬಂದ. ನಾರಾಯಣನಿಗೆ ಆಶ್ಚರ್ಯವಾಯಿತು.

ನಾರಾಯಣನ ತಂದೆ ತಿಮ್ಮಪ್ಪ ಆಗ ಮುಂಡಪ್ಪನಿಗೆ ಸಿಕ್ಕಿದ. ಮುಂಡಪ್ಪ ತಾನು ನಾರಾಯಣನಿಗೆ ಕೆಲಸ ತೆಗೆಸಿ ಕೊಟ್ಟಿದನು ಹೇಳಿದ. ತಿಮ್ಮಪ್ಪ ಅದಕ್ಕೆ ಸುಲಭವಾಗಿ ಒಪ್ಪಲಿಲ್ಲ. ಅವನಿಗೂ ಮುಂಡಪ್ಪನಿಗೂ ಒಂದು ಚಿಕ್ಕ ಯುದ್ಧವೇ ಆಯಿತು.

"ನಾವು ಎಷ್ಟೆಂದ್ರೂ ಹಳ್ಳಿಯೋರು;" ತಿಮ್ಮಪ್ಪನೆಂದ. "ಇವ ಈಗ ಕೆಲ್ಸಕ್ಕೆ ಸೇರಿದ್ರೆ ನಮ್ಗೇನು ಪ್ರಯೋಜನ? ಅವ್ನೇನಾದ್ರು ಬಸ್ಸ ಬಿಡ್ಲಿಕ್ಕೆ ಕಲೀಲಿಕ್ಕಿಲ್ಲ. ಕಲಿತ್ರೂ ಕೂಡ ಏನೋ ಅವನ ಹೊಟ್ಟೆಗೆ ಬೇಕಾದಷ್ಟು ಸಂಬ್ಳ ಸಿಗ್ಬಹುದು. ಅವನು ಇಲ್ಲೇ ಇರ್ಲಿ. ನನ್ಗೆ ಬೇಸಾಯ ತುಂಬಾ ಇದೆ"

"ಬೇಸಾಯ?" ಮುಂಡಪ್ಪ ಕೇಳಿದ್ದ. "ನೀವು ಮನೆಯಲ್ಲಿ ಇಷ್ಟು ಜನ್ರಿದ್ದೀರಿ. ನಿಮ್ಗೇನು ಕಡಿಮೆ? ಈ ಹುಡ್ಗ ಒಳ್ಳೆ ಹುಷಾರಿದ್ದಾನೆ. ಅವ್ನಿಗೆ ಮೋಟ್ರು ಕೆಲ್ಸದಲ್ಲಿ ಅಪೇಕ್ಷೆ ಇದೆ. ಒಮ್ಮೆ ಸೇರಿದ್ರೆ ಮೋಟ್ರು ಬಿಡ್ಲಿಕ್ಕಿಲ್ಲ, ಸ್ವಂತ ಮೋಟ್ರನ್ನೂ ಮಾಡ್ಕೊಂಡಾನು.

"ಸಂಬ್ಳ ಎಷ್ಟು ಸಿಗ್ತದೆ?" ತಿಮ್ಮಪ್ಪ ತನಗರಿಯದಂತೆಯೇ ಕೇಳಿಬಿಟ್ಟ.

"ಹತ್ರೂಪಾಯಿ."

"ಆಯ್ತು. ಸಂಬ್ಳ ಎಲ್ಲ ನನ್ಕೈಗೆ ಸಿಗ್ಬೇಕು. ಹಾಗಾದ್ರೆ ನಾಳೆಯೇ ಕೆಲ್ಸಕ್ಕೆ ಹೋಗ್ಲಿ. ಇಲ್ಲಿ ಬೇಕಾದ್ರೆ ಮಾತ್ರ ಕೆಲ್ಸದಿಂದ ಬಿಡ್ಸಿಯೇನು, ತಿಳೀತೆ?" ಎಂದು ತಿಮ್ಮಪ್ಪ ಕೊನೆಗೆ ಮುಂಡಪ್ಪನ ಮಾತಿಗೆ ಒಪ್ಪಿಗೆ ಇತ್ತ.

ತಿಮ್ಮಪ್ಪ ಹೀಗೆ ಹೆದರಿಸಿದ್ದರೂ ಮತ್ತೆ ನಾರಾಯಣನಿಗೆ ತನ್ನ ಕೆಲಸ ಬಿಟ್ಟು ಮನೆಯಲ್ಲಿ ಕುಳಿತುಕೊಳ್ಳುವ ಪ್ರಮೇಯ ಬಂದೊದಗಿರಲಿಲ್ಲ. ಕೆಲಸಕ್ಕೆ ಸೇರಿದೊಡನೆಯೇ ಅವನಿಗೆ ಖಾಕಿಯ ಅಂಗಿ ಇಜಾರು

ನಿಲ್ಲಿಸಿ ಎಲ್ಲಿ ಅವನು ಕಾಫಿ ಕುಡಿಯಲಿಕ್ಕೆ ಹೋದರೂ ಅವನಿಗೆ ಅವನ ಪರಿಚಯಸ್ಥ ಪ್ರಯಾಣಿಕರೇ ಹಣ ಕೊಡುವರು.

ಮುಂಡಪ್ಪನ ವಿನೋದಕ್ಕೂ ಕಡಿಮೆಯಿಲ್ಲ. ಅವನಿಗೆ ಇಂಗ್ಲೀಷ್ ಬಿಟ್ಟು ಕನ್ನಡ ಕೂಡ ಸರಿಯಾಗಿ ಬರುತ್ತಿದ್ದಿಲ್ಲ. ಆದರೆ ಎಲ್ಲರೊಡನೆಯೂ ಅವನು "ಬಟ್ಲರ್" ಇಂಗ್ಲೀಷಿನಲ್ಲೇ ಮಾತಾಡುವನು. ಅವನ ಇಂಗ್ಲೀಷ್ ಎಲ್ಲರಿಗೂ ತಿಳಿದೂ ಇತ್ತು. ರಸ್ತೆಯಲ್ಲಿ ಅವನ ಪರಿಚಯದವರು ಬಸ್ಸನ್ನು ನಿಲ್ಲಿಸಿದರೆ "ವಾಟ್ ಸರ್, ಗೋಯಿಂಗ್?" ಎಂದು ಅವನು ಕೇಳುವನು. "ಬಸ್ ಲೇಟ್. ಸ್ಪೀಡ್ ಗೋಯಿಂಗ್. ರೋಡ್ ಬ್ಯಾಡ್. ಪೆಟ್ರೋಲ್ ನಾಟ್ ಕಮಿಂಗ್" ಎಂದು ಅವನು ಬಸ್ಸು ತಡವಾದರೆ ಹೇಳುವನು.

ಬಸ್ಸಿನ ನಿಲ್ದಾಣಗಳಲ್ಲಿ ಹುಡುಗರು ಅವನಿಗೆ ಗೇಲಿಮಾಡುವರು. "ಮುಂಡಪ್ಪ ಬಸ್ ಗೋಯಿಂಗ್. ಮುಂಡಪ್ಪ ಬಸ್ ಕಮಿಂಗ್. ನೋ ಪೆಟ್ರೋಲ್. ನೋ ಟಿಫಿನ್" ಎನ್ನುವರು.

ಮತ್ತೆ ಬಸ್ಸಿನಲ್ಲಿ ಅವನ ಬಳಿಯಲ್ಲಿ ಯಾರಾದರೂ ಅವನ ಪರಿಚಯವುಳ್ಳ ಪ್ರಯಾಣಿಕರು ಕುಳಿತರೆಂದರಾಯಿತು. ಅವರು ಮತ್ತೆ ಅವನನ್ನೇ ಆಲಿಸಬೇಕು. ಎಲ್ಲೆಲ್ಲಿಯ ಕತೆಗಳು; ಎಲ್ಲೆಲ್ಲಿಯ ಪುರಾಣಗಳು ಅವನೊಡನೆ! ಏನೆಲ್ಲ ಸುದ್ದಿ ಸಮಾಚಾರಗಳು! ಯಕ್ಷಗಾನದ ಅರ್ಥವೇನು! ಖೂನಿ ಮೊಕದ್ದಮೆಗಳ ಸುದ್ದಿಯೇನು! ಅವನು ಮೋಟಾರ್ ನಡೆಸುವ ವೈಖರಿಯೂ ಮನಸ್ಸನ್ನು ಸೆಳೆಯುವಂತಹದು. ಬೀಡಿಗೆ ಬೆಂಕಿ ಹಚ್ಚುವಾಗ ಸ್ಟೀಯರಿಂಗ್ ಚಕ್ರವನ್ನು ಬಿಟ್ಟೇಬಿಡುವ. ಆದರೂ ಬಸ್ಸು ನೇರವಾಗಿ ಹೋಗುವುದು. ಕೆಲವಡೆ ಅವನು ಹೋಗುವ ವೇಗವೂ ಮಿತಿ ಮೀರುತ್ತಿತ್ತು. ಮತ್ತೆ ಹಾರ್ನು ಹೊಡೆಯುವ ನಮೂನೆಯಂತೂ ಬಹಳ ವಿಚಿತ್ರವಾದುದು. ಅದರ ಸ್ವರ ಕೇಳಿಯೇ ಮುಂಡಪ್ಪನ ಬಸ್ಸು ಬಂತೆಂದು ಜನರು ಹೇಳಬಹುದಾಗಿತ್ತು.

ಮುಂಡಪ್ಪ ಯಾರೊಡನೆಯೂ ಸೌಜನ್ಯದ ಮೇರೆಯನ್ನು ಮೀರಿ ಮಾತಾಡುವವನಲ್ಲ. ಎಲ್ಲರೂ ಅವನಿಗೆ "ಅಣ್ಣ" ಇಲ್ಲವೇ "ಅಜ್ಜ"ಂದಿರು. ಹೆಂಗಸರನ್ನು "ಅಕ್ಕ", "ಅಜ್ಜಿ" ಎಂದು ಅವರವರ ವಯಸ್ಸಿಗ

ನುಗುಣವಾಗಿ ಸಂಬೋಧಿಸುತ್ತಿದ್ದ. ಮತ್ತೆ ಅವನಿಗೆ ಪರಿಚಯವಿದ್ದ "ಪಟೇಲರು" "ಶ್ಯಾನುಭಾಗರು". "ಉಗ್ರಾಣಿಗಳು". "ಶೆಟ್ಟರು". "ಸಾಹುಕಾರರು"— ಇವರಿಗೇನೂ ಕಡಿಮೆಯಿದ್ದಿಲ್ಲ. ಹೀಗೆ ಒಮ್ಮೆ ಅವನಿಗೆ ಪರಿಚಯವಾಯಿತೆಂದರೆ ಮತ್ತೆ ಅವರು ಬೇರೆ ಯಾರ ಬಸ್ಸಿನಲ್ಲೂ ಹೋಗಲಿಕ್ಕಿಲ್ಲ.

ನಾರಾಯಣನಿಗೆ ಕೆಲವು ಸಮಯ ಜನರೊಡನೆ ಮಾತಾಡುವುದಕ್ಕೇ ನಾಚಿಕೆಯಾಗುತ್ತಿತ್ತು. ಅದೂ ಹೆಂಗಸರನ್ನು ಅವರ ಸೀಟಿನಲ್ಲಿ ಕುಳ್ಳಿರಿಸುವ ಕೆಲಸ ಅವನಿಗೆ ಹಿಡಿಸುತ್ತಿದ್ದಿಲ್ಲ.

"ನಮ್ಮ ಹುಡುಗ ಸ್ವಲ್ಪ ಹೊಸಬ. ಅವನಿಗೆ ಮಾತಾಡ್ಲಿಕ್ಕೆ ತಿಳಿಯೋದಿಲ್ಲ. ಎಲ್ಲಾದ್ರೂ ಬಸ್ಸು ನಿಲ್ಲಿಸ್ಬೇಕಾದ್ರೆ ನೀವೇ ಹೇಳಿ" ಎಂದು ಮುಂಡಪ್ಪ ಪ್ರಯಾಣಿಕರಿಗೆ ಹೇಳುತ್ತಿದ್ದ.

ಆದರೆ ನಾರಾಯಣನಿಗೆ ಮೆಲ್ಲಮೆಲ್ಲನೆ ಧೈರ್ಯವಾಗುತ್ತಿತ್ತು. ಮುಂಡಪ್ಪನ ಮಾತಿನ ವೈಖರಿ, ನುಡಿಗಟ್ಟುಗಳು ಸ್ವಲ್ಪ ಸ್ವಲ್ಪ ಅರ್ಥವಾಗುತ್ತಿದ್ದುವು. ಜನರೊಡನೆ ಮಾತಾಡಲು ಅವನು ಕಲಿಯುತ್ತಿದ್ದ. ದೊಡ್ಡ ದೊಡ್ಡ ರುಮಾಲು ಕಟ್ಟಿಕೊಂಡವರೊಡನೆ, ಕಿವಿಯಲ್ಲಿ ಹೊಳೆಯುವ ವಜ್ರದ ಕಲ್ಲುಗಳಿರುವವರೊಡನೆ, ಮುಖದಲ್ಲಿ ಉದ್ದ ಮೀಸೆಯುಳ್ಳವರೊಡನೆ, ಕಾಲುಗಳಲ್ಲಿ ಹೊಳೆಯುವ ಬೂಟ್ಸುಗಳಿರುವವರೊಡನೆ— ಎಲ್ಲ ಅವನು ಮಾತಾಡ ತೊಡಗಿದ. ಮಾತಾಡಿದಂತೆ ಅವನ ಮನಸಿನಲ್ಲಿದ್ದ ಅಳುಕು—ಅಂಜುಬುರುಕತನಗಳು ಮಾಯವಾಗುತ್ತಿದ್ದುವು. ಕ್ರಮೇಣ ಮುಂಡಪ್ಪನಂತೆ ವಿನೋದವಾಡುವುದನ್ನು ಅವನು ಅಭ್ಯಸಿಸಿದ.

—ನಾರಾಯಣ ಇವನ್ನೆಲ್ಲ ನೆನೆಯುತ್ತಿದ್ದಂತೆಯೇ ಅವನಿಗೆ ಹೋದ ಸಮಯ ಇನ್ನೊಮ್ಮೆ ಬರಬಹುದೆಂಬ ಭಾಸವಾಯಿತು. ಪುನಃ ತಾನು ದನ ಮೇಯಿಸುವ ಹುಡುಗನಾಗಬಹುದು. ಮತ್ತೆ ಬಸ್ಸಿನ ಕ್ಲೀನರನಾಗಬಹುದು. ಮುಂಡಪ್ಪನ ಸಖ್ಯ ಬೆಳೆಸಿ ಅವನ ತಂಗಿಯನ್ನು ಮರಳಿ ಮದುವೆಯಾಗಬಹುದು. ಯೋಚನೆಯ ಒತ್ತಡ ಅವನ ಮನ

ಸ್ಸನ್ನು ಅಲ್ಲೋಲಕಲ್ಲೋಲವನ್ನಾಗಿ ಮಾಡುತ್ತಿತ್ತು. ಅದನ್ನು ತಡೆ ಗಟ್ಟಲು ಅವನು ವಿಶ್ಯ್ರತ ಭಾವನೆಗಳನ್ನು ಯೋಚಿಸುತ್ತಿದ್ದ. ವಿಕಾರ ರೂಪಗಳನ್ನು ಕಲ್ಪಿಸುತ್ತಿದ್ದ. ಆದರೆ ನಿದ್ದೆಯ ಸುಳಿವೇ ಇಲ್ಲ.

ರುಕ್ಕು ನಿದ್ದೆಯಲ್ಲಿ ಅವನ ಬಳಿಗೆ ಹೊರಳಾಡಿದಳು. ಅವನಿಗೆ ಅವಳನ್ನು ತಾನು ಮುಟ್ಟಬೇಕೋ ಬೇಡವೊ ಎಂದು ತಿಳಿಯದಂತಾ ಯಿತು. ಈ ತನಕ ತಾನು ಆಕೆಯನ್ನು ಪ್ರೀತಿಸುತ್ತಿದ್ದೆ ನಿಜ; ಆದರೆ ಇನ್ನು ಮುಂದೆ ಅವಳನ್ನು ತಾನು ಯಾವ ಕೈಗಳಿಂದ ಅಪ್ಪಿ ಹಿಡಿಯಬೇಕು. ಯಾವ ಕಣ್ಣುಗಳಿಂದ ನೋಡಬೇಕು? ಅವಳು ನಿಜಸ್ಥಿತಿಯನ್ನರಿತರೆ ತನ್ನ ಮೇಲೆ ಸಿಡಿದು ಬೀಳದಿರಬಹುದೆ? ತನ್ನನ್ನು ಶಿಕ್ಷೆಗೊಳಪಡಿಸದಿರಬಹುದೆ? ಹೀಗೆಂದು ಅವಳ ವ್ಯಕ್ತಿನಿಷ್ಠ ಬಾಂಧವ್ಯವನ್ನು ವಿಶ್ಲೇಷಿಸಿದನವ. ಆಕೆಯ ಕೈ ಅವನ ಬೆನ್ನ ಹಿಂದೆ ಸರಿಯಿತು. ಆಕೆಯ ಎದೆ ಅವನ ಎದೆಯನ್ನು ತಾಗಿತು. ಅವಳ ಮೊಣಕಾಲು ಅವನ ಮೊಣಕಾಲನ್ನು ಒತ್ತುತ್ತಿತ್ತು.

ಆದರೆ ನಿಜಸ್ಥಿತಿ ಯಾರಿಗೂ ತಿಳಿಯದೆಂಬ ಆಶಾವಾದ ಮನಸ್ಸಿನ ಇನ್ನೊಂದು ಮೂಲೆಯಿಂದ ಹೊಳೆಯುತ್ತಿತ್ತು. ಅದು ಹೇಗೆ ಉಳಿದ ವರಿಗೆ ಗೊತ್ತಾಗಬೇಕು? ಯಾರು ನೋಡಿದ್ದಾರೆ? ಹಾಗೆ ನೋಡಿ ದ್ದರೆ ಆ ಸಂಗತಿ ಈ ಒಳಗೇ ಪ್ರಕಟವಾಗಬೇಕಿತ್ತು. ಪೋಲೀಸಿನವರು ತನ್ನನ್ನು ಅಟ್ಟಿಕೊಂಡು ಬರಬೇಕಿತ್ತು.

ಹೆಣವಾದರೂ ಹೇಳೀತೆಂದರೆ ಅದು ಸುಟ್ಟುಹೋಗಿದೆ!

ಇನ್ನು ದೊಡ್ಡಮನೆಗೆ ಹೋಗಿ ಲಾರಿಯನ್ನು ಪಡೆಕೊಳ್ಳುವು ದೊಂದೇ ಬಾಕಿ. ಈ ತಿಂಗಳು ಸಂಬಳದ, ಸಿಕ್ಕಿದವರಿಗೆ ಸಲಾಮು ಹಾಕುವ ದಾಸ್ಯಜೀವನ ಇನ್ನು ನಿಲ್ಲಬೇಕು. ರುಕ್ಕುವಿಗೂ ಆಗ ಹೆಚ್ಚು ಸುಖ ಸಿಕ್ಕದಿರದು........

ಹೀಗೆಲ್ಲ ಯೋಚಿಸುತ್ತ ನಾರಾಯಣ ರುಕ್ಕುವಿನ ಬೆನ್ನಿನ ಮೇಲೆ ಕೈ ಹಾಕಿ ಆಕೆಯನ್ನು ಇನ್ನೂ ಹತ್ತಿರ ಬರಸೆಳೆದ.

ಅಷ್ಟರಲ್ಲೇ ಒಳಗಿದ್ದ ಅಲಾರಂ ಗಡಿಯಾರ ಗಂಟೆ ಬಾರಿಸತೊಡ ಗಿತು. ನಾರಾಯಣ ಆಗಲೇ ಏಳುವುದರಲ್ಲಿದ್ದರೂ ತಾನು ಮರುದಿನಕ್ಕೆ ರಜೆ ಪಡೆದಿರುವೆನೆಂಬ ನೆನಪಾಗಿ ಅವನು ಸುಮ್ಮನೆ ಮಲಗಿಕೊಂಡ.

೫

ನಾರಾಯಣ ಮರುದಿನ ಏಳುವಾಗ ಗಂಟೆ ಹತ್ತಾಗಿತ್ತು. ಆವರೂ ಅವನ ಕಣ್ಣುಗಳು ಉರಿಯುತ್ತಿದ್ದುವು. ನಿದ್ದೆಯಲ್ಲೂ ಮನಸ್ಸು ಎಚ್ಚರ ದಲ್ಲಿತ್ತು. ಅವನಿಗೆ ಕನಸ್ಸಿನಲ್ಲಿ ಕಂಡ ಅನೇಕ ದೃಶ್ಯಗಳು ನಿಜವಾ ಗಿಯೂ ನಡೆದುವೋ ಎಂದೂ ಸಂಶಯವಾಗುತ್ತಿತ್ತು. ಒಂದೆರಡು ಬಾರಿ ಅವನು ಅತ್ತಿದ್ದ. ಒಮ್ಮೆ ಕೂಗಿಯೂ ಇದ್ದ.

ಹೊರಗೆ ಹೋಗುವಾಗ ಜಗಲಿಯಲ್ಲಿ ಮುತ್ತ ಕುಳಿತುಕೊಂಡಿದ್ದ.

ನಾರಾಯಣ ಹಲ್ಲು ತಿಕ್ಕಿ ಮುಖ ತೊಳೆದುಕೊಂಡು ಬಂದ. ರುಕ್ಕು ಅವರಿಬ್ಬರನ್ನು ಒಳಗೆ ಕರೆದಳು.

"ನನ್ಗೇನೂ ಬೇಡ" ಎಂದ ಮುತ್ತ.

"ಒಂದಿಷ್ಟು ಕಾಫಿ ಕುಡಿ" ಎಂದು ನಾರಾಯಣ ಒತ್ತಾಯ ಪಡಿ ಸಿದ.

"ನನಗೆ ಬೇಡ, ನಾನು ಈಗ ಕುಡಿದು ಬಂದೆ," ಎಂದು ಮುತ್ತ ಕುಳಿತಲ್ಲಿಂದ ಏಳಲಿಲ್ಲ.

ನಾರಾಯಣನಿಗೆ ಮುತ್ತನ ಮುಖವನ್ನು ನೋಡಿ ಹೆದರಿಕೆ ಯಾಗದಿರಲಿಲ್ಲ. ಅವನ ಕಣ್ಣುಗಳು ಕೆಂಪುಕೆಂಪಾಗಿದ್ದುವು. ಮುಖ ದಲ್ಲಿ ಒಂದು ಕರ್ರಗಿನ ಛಾಯೆ ಸುಳಿಯುತ್ತಿತ್ತು. ತುಟಿಗಳು ಒಣಗಿ ಹೋಗಿದ್ದುವು.ತಲೆಗೆ ಎಣ್ಣೆ ಹಾಕದೆ ಕೂದಲುಗಳೆಲ್ಲ ನೆಟ್ಟಗೆ ಎದ್ದು ನಿಂತಿದ್ದುವು. ಅವನು ಮಾತಾಡುವಾಗ ಅವನ ಕಂಠ ನಡುಗುತ್ತಿತ್ತು. ಅವನ ಕಣ್ಣ ದೃಷ್ಟಿಯಲ್ಲಿ ಒಂದು ವಿಧದ ನಿರ್ಜೀವ ಕರಾಳತೆ ಹೊಳೆ ಯುತ್ತಿರುವುದು ನಾರಾಯಣನಿಗೆ ತೋರಿತು. ಅವನು ಬೆಚ್ಚಿ ಬಿದ್ದ.

ಕಾಫಿ ಕುಡಿಯುವಾಗ ಪುನಃ ಮುತ್ತನಿಗೆ ತನ್ನಮೇಲೆ ಏನಾ

ದರೂ ಸಂಶಯುವಿದೆಯೇ ಎಂದು ಅವನಿಗೆ ಭಾಸವಾಗುತ್ತಿತ್ತು. ಮುತ್ತ ಧಾಂಡಿಗ,ಒಳ್ಳೆಯ ಅಚ್ಚುಕಟ್ಟಾದ ದೇಹ ವುಳ್ಳವ. ಯಾರಾದರನ್ನೊಮ್ಮೆ ಕೋಪದಲ್ಲಿ ಹಿಡಿದುಬಿಟ್ಟನೆಂದರೆ ಅವರನ್ನು ಅವನು ಸದೆ ಬಡಿಯುಬಲ್ಲ. ಅವನನ್ನು ಪಹಿಲ್ವಾನನೆಂದು ಊರಲ್ಲಿ ಕರೆಯುತ್ತಿದ್ದರು. ಅವನು ಈಗ ತನ್ನ ಮೇಲೆ ಏರಿ ಬಂದರೆ ತಾನೇನು ಮಾಡಬಲ್ಲೆ .ಎಂದು ನಾರಾಯಣನಿಗೆ ಭಯವಾಯಿತು. ಆದುದರಿಂದಲೇ ರುಕ್ಕು ಅವನಿಗೆ ಕಾಫಿಯನ್ನು ಸಾಧಾರಣ ತಣಿಸಿಯೇ ಕೊಟ್ಟಿದ್ದರೂ ಅವನು ಲೋಟವನ್ನು ಕೈಯಲ್ಲಿ ಹಿಡಿದುಕೊಂಡು ಇನ್ನೂ ಅದನ್ನು ಊದುತ್ತ ತಣಿಸುತ್ತಿದ್ದ. ಇಂಥ ಯಾವುದಾದರೊಂದು ಅಡ್ಡ ಕೆಲಸ ತನಗೆ ಸಿಕ್ಕಿದರೆ ಮುತ್ತ ಹಿಂದಿರುಗುವ ತನಕವೂ ತಾನು ಅದರಲ್ಲೆ ಮಗ್ನನಾಗಿ ಉಳಿಯಬಹುದೆಂದು ಅವನಿಗೆ ತೋರುತ್ತಿತ್ತು.

ಆದರೆ ಮುತ್ತ ತನ್ನೊಡನೆ ಏನನ್ನೋ ಮಾತಾಡಲು ಬಂದಿರಬೇಕು. ಅವನು ಅದನ್ನು ಮಾತಾಡದೆ ಹಿಂದಿರುಗಲಾರ. ಬಹುಶಃ ಪೋಲೀಸರು ಈ ಒಳಗೇ ತನ್ನ ಅಪರಾಧವನ್ನು ಕಂಡು ಹಿಡಿದಿರಬಹುದು. ಆ ಮಾಹಿತಿಯನ್ನು ಮುತ್ತನಿಗೆ ಕೊಟ್ಟಿರಬಹುದು. ಮುತ್ತ ಅದಕ್ಕಾಗಿಯೇ ತನ್ನ ಮೇಲೆ ಈಗ ಕಿಡಿ ಕಾರುತ್ತಿರುವುದು. ಹಣದ ಲಾಭಕ್ಕಾಗಿ ತನ್ನ ತಂದೆಯನ್ನು ಕೊಂದೆ, ನಿನ್ನನ್ನು ಈಗ ಕೊಂದುಬಿಡುವೆ ಎಂದು ತನ್ನ ಮೇಲೆ ಒಮ್ಮೆಲೇ ಹಾರಿ ಬೀಳಬಹುದು. ಹಾಗೆ ಮಾಡಿದರೆ ರುಕ್ಕು ಏನು ಮಾಡುವಳೋ ಎಂದು ಹೇಳಲಾಗದು. ಅವಳೂ ತನ್ನನ್ನು ದೂಷಿಸಿ ತನಗೆ ಹೊಡೆಯಲು ಬರಬಹುದು. ಅವಳ ಮಗನೂ ತನ್ನ ಮೇಲೇರಿ ಬರಬಹುದು. ತಾನು ಕೇವಲ ನಿಸ್ಸಹಾಯಿ. ತನಗೆ ಬೇಕಾದವರು ಇಲ್ಲಿ ಯಾರೂ ಇಲ್ಲ. ತನ್ನನ್ನು ರಕ್ಷಿಸುವವರು, ತನಗೆ ಸಹಾಯ ಮಾಡುವವರು ಇಡೀ ಲೋಕದಲ್ಲೇ ಬಹುಶಃ ಇಲ್ಲ. ತನ್ನ ತಂದೆ ತಾಯಿಗಳು ತನ್ನನ್ನು ಮರೆತುಬಿಟ್ಟಿರಲೂ ಬಹುದು. ಅವರನ್ನು ತಾನಂತೂ ಎಂದೋ ಮರೆತಿದ್ದೇನೆ. ಅವರನ್ನು ಇಷ್ಟು ಸುಲಭವಾಗಿ ಕಡೆಗಣಿಸಿದ್ದ ಅಪರಾಧಕ್ಕಾಗಿಯೇ ತನಗೆ ಈ ಶಿಕ್ಷೆ ದೊರೆತುದೋ ಏನೋ, ಅವರು ತನ್ನನ್ನು ಚಿಕ್ಕಂದಿನಲ್ಲಿ ಸಾಕಿ ಸಲಹಿದವರು. ಆದರೆ

ಅವರು ತನಗೆ ಬೇಡವಾಯಿತು. ಅವರಿಗೇನಾದರೂ ಹಣವನ್ನು ಕೊಡುವುದಂತಿರಲಿ, ಅವರ ಮನೆಗೆ ಹೋಗಿ ಅವರು ಜೀವದಿಂದಿರುವರೋ ಸತ್ತಿದ್ದಾರೋ ಎಂದು ಕೂಡ ತಾನು ಈ ಹಲವು ವರ್ಷಗಳ ಅವಧಿಯಲ್ಲಿ ನೋಡಿಲ್ಲ! ತಾನು ಈ ಹೊಸ ಜೀವನದ ಮಬ್ಬಿನಲ್ಲಿ, ಹೊಸ ಜನರ ಬಾಂಧವ್ಯದ ಹಿಗ್ಗಿನಲ್ಲಿ, ಹೊಸ ವಾತಾವರಣದ ಅಮಲಿನಲ್ಲಿ ಲೋಕವನ್ನೇ ಮರೆತು ಬಿಟ್ಟೆ! ತಾನು ಅವರ ಮಾತನ್ನು ಮೀರಿ ಮದುವೆಯಾದೆ. ಆದರೂ ಅವರು ಉಪಚಾರಕ್ಕಾಗಿ ಮದುವೆಗೆ ಬಂದಿದ್ದರು. ತನ್ನ ತಾಯಿ ತನ್ನನ್ನು ಮರೆಯಬೇಡವೆಂದು ಕೂಗಿ ಹೇಳಿದ್ದಳು. ತಂದೆ, "ಇದು ಅಪಾಯದ ಕೆಲಸ, ಮೋಟರುಗಳು ರಸ್ತೆಯಿಂದ ಉರುಳುತ್ತವೆ, ನೀನು ಆಗ ಅಪಘಾತಕ್ಕೊಳಗಾಗಿ ಸಾಯಬಹುದು. ಇಲ್ಲವೇ ಕೈ ಕಾಲುಗಳನ್ನು ಕಳೆದುಕೊಂಡು ಅಂಗಹೀನನಾಗಬಹುದು" ಎಂದು ಎಚ್ಚರಿಸಿದ್ದ. ಆದ್ದರಿಂದ ಮನೆಯಲ್ಲಿ ಇನ್ನಾದರೂ ಉಳಕೊಂಡು ಬೇಸಾಯ ಮಾಡು ಎಂದು ಅವನು ಹೇಳಿದ್ದ.

ತಾನು ಕೇವಲ ಹಳ್ಳಿಯಮಂಗ. ಅರ್ಥಾರ್ಥ ಸಂಬಂಧ ತಿಳಿಯದೆ, ಎಲ್ಲ ಸಂಗತಿಗಳನ್ನೂ ವಿಚಾರಿಸದೆ, ಈ ಪರಿಸ್ಥಿತಿಗೆ ಇಳಿದು ಬಿಟ್ಟೆ.

—ಹೀಗೆ ನಾರಾಯಣ ಯೋಚಿಸುತ್ತಿದ್ದಾಗ ಮುತ್ತ ಒಳಗೆ ಬಂದ. ನಾರಾಯಣ ಮೆಲ್ಲನೆ ಕಾಫಿಯನ್ನು ಸ್ವಲ್ಪ ಸ್ವಲ್ಪವಾಗಿಯೇ ಚೀಪತೊಡಗಿದ. ಎಷ್ಟು ಚೀಪಿದರೂ ಅಕ್ಷಯ ಪಾತ್ರೆಯಂತೆ ಲೋಟದಲ್ಲಿ ಕಾಫಿ ಮುಗಿಯುವಂತೆ ತೋರುತ್ತಿದ್ದಿಲ್ಲ. ಹಾಗೆ ಚೀಪುತ್ತಿರುವಾಗ ಅವನು ಮುತ್ತನನ್ನು ಕಡೆಗಣ್ಣಿನಿಂದ ನೋಡುತ್ತಿದ್ದ.

"ಏನು ಭಾವಯ್ಯ? ಮುಂದಿನದ್ದನ್ನು ಮಾತಾಡಬೇಕಲ್ಲ? ಎಂದು ಮುತ್ತ ಕೇಳಿದ.

ನಾರಾಯಣ ಬೆಚ್ಚಿ ಬಿದ್ದು ಕಾಫಿಯ ಲೋಟವನ್ನು ಕೆಳಗಿಟ್ಟ. ಮುತ್ತ ಆದಷ್ಟು ಸೌಮ್ಯವಾಗಿಯೇ ಮಾತಾಡಿದ್ದರೂ ನಾರಾಯಣನಿಗೆ ಅವನ ಧ್ವನಿ ಕರ್ಕಶವಾಗಿ, ಕಠೋರವಾಗಿ ಕೇಳಿತು. ಅವನು ಮಾರು

ತ್ತರ ಕೊಡುವುದನ್ನು ಬಿಟ್ಟು ಮುತ್ತ ಕೇಳಿದ ಪ್ರಶ್ನೆಯನ್ನು ವಿಶ್ಲೇಷಿಸ ತೊಡಗಿದ: ಮುಂದಿನದ್ದೆಂದರೆ ಏನು? ಎಂಬುದು ಅವನಿಗೆ ತಿಳಿಯ ಲಿಲ್ಲ. ಮುತ್ತನೊಡನೆ ಕೇಳಲು ಅವನಿಗೆ ಧೈರ್ಯವಿಲ್ಲ.

"ದೇಜಣ್ಣ ಹೇಳಿದ್ರು ಬೊಜ್ಜ ಗೌಜಿಯಲ್ಲೇ ಆಗ್ಬೇಕೆಂದು. ಅಣ್ಣ ನಾಳೆ ಬಂದಾರು. ಇವತ್ತು ಬೆಳಿಗ್ಗೆ ಟೆಲಿಗ್ರಾಂ ಬಂದಿದೆ. ಬೊಂಬಾಯಿಯಿಂದ ಅವ್ರು ಹೊರ್ಟಿದ್ದಾರಂತೆ."

"ನನ್ನಿಂದೇನಾಗ್ಬೇಕೆಂದು ಹೇಳ್ಬಿಡು" ಎಂದ ನಾರಾಯಣ ತುಸು ಧೈರ್ಯದಿಂದ.

"ನಿಮ್ಮಿಂದಾಗ್ಬೇಕಾದ್ದೇನು? ಅಪ್ಪ ಏನೆಲ್ಲ ಮಾಡಿದ್ದಾರೋ ಇನ್ನು ಆ ವಕೀಲ್ರಲ್ಲಿ ಕೇಳ್ಬೇಕಷ್ಟೆ."

"ಹೂಂ. ನಾನೇನ್ಮಾಡ್ಬೇಕೆಂದು ನೀನೇ ಹೇಳಿದ್ರಾಯ್ತು."

"ನಮ್ಮ ಮನೆಗೆ ನೀವೆಲ್ಲ ಬನ್ನಿ," ಮುತ್ತ ತಡವರಿಸುತ್ತ ಹೇಳಿದ. "ಅಪ್ಪ ಹಾಗೆ ನಿಮ್ಗೆ ಹೇಳಿದ್ರಲ್ಲ? ನಿಮ್ಗೆ ಇಚ್ಛೆಯಿದ್ರೆ ನಾ ಉಳ್ಕೋಳ್ತೇನೆ. ಇಲ್ವಾದ್ರೆ ಹೋಗ್ಬಿಡ್ತೇನೆ"

"ಛೆ! ಹುಚ್ಚ! ನಾ ನಿನ್ನನ್ನು ಮನೆ ಬಿಡಲು ಹೇಳಿದೆನೆ? ನಮ್ಗೇಕೆ ಮನೆ? ಇಲ್ಲಿ ಈ ಮನೆ ಇದೆಯಲ್ಲ? ಅದ್ನೆಲ್ಲ ಮತ್ತೆ ನೋಡೋಣ. ನನ್ಗೆ ನೀನು ಬೇರೆಯೇ ಅಥವಾ ರುಕ್ಕು ಬೇರೆಯೇ? ನೀನು ಹಾಗೆಲ್ಲ ಈಗ ಯೋಚಿಸಬೇಡ."

ಮುತ್ತನ ಕಣ್ಣುಗಳಿಂದ ನೀರಿಳಿಯುತ್ತಿತ್ತು. ರುಕ್ಕು ಬಾಗಿಲಲ್ಲಿ ನಿಂತುಕೊಂಡು ಜೋರಾಗಿ ಅಳಹತ್ತಿದಳು. ನಾರಾಯಣನ ಕಂಠವೂ ಗದ್ಗದವಾಗಿತ್ತು. ಅವನ ಕಣ್ಣಿನಿಂದಲೂ ಕಣ್ಣೀರು ಹನಿಹನಿಯಾಗಿ ಉದುರತೊಡಗಿತು. ಮಕ್ಕಳು ಹೊರಗಿದ್ದುವು.

"ಅಲ್ಲ ಭಾವ," ಮುತ್ತ ಹೇಳಿದ. "ಆಗೋದೆಲ್ಲ ಆಗಿಹೋಗ್ಲಿ. ಮತ್ತೆ ನಾ ಅಪ್ಪನ ಇಚ್ಛೆಗೆ ಅಡ್ಡಿ ಬಂದೆ ಎಂದು ಯಾರೂ ಹೇಳೋದು ಬೇಡ. ಅಪ್ಪ ನನ್ನನ್ನು ಈತನ್ಕಾ ಬೆಳ್ಸಿದ್ದಾರೆ. ಮಾತ್ರವಲ್ಲ, ನನ್ಗೆ ಒಂದು ವೃತ್ತಿಯನ್ನು ಕೂಡ ಕಲ್ಸಿ ಕೊಟ್ಟಿದ್ದಾರೆ."

"ಮತ್ತೆ ನಮ್ಗಾದ್ರು ಅವ್ರ ಸಂಪತ್ತು ಏಕೆ? ನಾವೂ ದುಡಿಯುತ್ತೀವೆ," ಎಂದು ರುಕ್ಕು ಅಳುವಿನ ಮಧ್ಯದಲ್ಲಿ ಹೇಳಿದಳು.

"ಅದ್ನೆಲ್ಲ ಮತ್ತೆ ನೋಡೋಣ ಮುತ್ತ. ನೀನೀಗ ನನ್ನಿಂದೇನಾಗ್ಬೇಕಾಗಿದೆ ಹೇಳು."

"ಅದೇ ಹನ್ನೆರ್ಡನೇ ದಿನ. ನೀವು ರಜೆ ತೆಗೆದ್ಕೊಳ್ಳಿ ಅಂದು. ಸಾಮಾನನ್ನೆಲ್ಲ ನಾನು ಆದಷ್ಟು ಸಂಗ್ರಹಿಸುತ್ತೇನೆ. ವಕೀಲ್ರಲ್ಲಿಗೆ ಬೇಕಾದ್ರೆ ಅಣ್ಣ ಬಂದ್ಮೇಲೆ ಹೋಗೋಣ."

"ಹೂಂ," ನಾರಾಯಣನೆಂದ.

"ನೀ ಮತ್ತು ಅದನ್ನೇ ಹೇಳ್ತಿದ್ದಿಯಲ್ಲ ಮುತ್ತಣ್ಣ?" ಎಂದು ರುಕ್ಕು ರೋದಿಸಿದಳು.

ನಾರಾಯಣ ಮಾತಾಡಲಿಲ್ಲ. ಮುತ್ತ ಹೊರಗೆ ಹೋದ.

"ಬೇಕಾದ್ರೆ ನೀವಿಬ್ರು ಇಲ್ಲೇ ಇರಬಹುದಲ್ಲ?" ನಾರಾಯಣ ಮತ್ತೆ ಮುತ್ತನನ್ನು ಕರೆದು ಕೇಳಿದ. "ನೀನು ಕೆಲಸಕ್ಕೆ ಹೋಗುವಾಗ ನಿನ್ನ ಹೆಂಡ್ತಿಗೆ ಒಬ್ಬಿಗೇ ಬೇಸರವಾಗೋದಿಲ್ವೆ? ಪಾಪ! ಅವ್ಳಿಗೆ ಹೆದ್ರಿಕೆಯೂ ಆದೀತು. ಬೊಜ್ಜ ಮುಗಿಯೋತನಕ ನೀವು ಇಲ್ಲೇ ಇದ್ದು ಬಿಡಿ."

"ಬೊಜ್ಜ ಮುಗಿಯೋ ತನ್ಕ ನಾ ಕೆಲಸಕ್ಕೆ ಹೋಗೋದಿಲ್ಲ. ಭಾವಯ್ಯ. ಹಾಗೆ ಬೇಸ್ರವಾದ್ರೆ ಅವ್ಳನ್ನು ಇಲ್ಲಿಗೆ ಕಳಿಸ್ತೇನೆ. ಅವ್ಳಿಗೇನು ಹಾಗೆ ಹೆದ್ರಿಕೆಯಾಗ್ಲಿಕ್ಕಿಲ್ಲ. ಹಾಗೆ ರುಕ್ಕುವೂ ನಮ್ಮಲ್ಲಿ ಬಂದು ಹೋಗಬಹುದಲ್ಲ?"

"ನಿನ್ನಿಚ್ಛೆ" ನಾರಾಯಣ ಹೇಳಿದ.

ರುಕ್ಕು ಇನ್ನೂ ಕೂಗುತ್ತಲೇ ಇದ್ದಳು. ಅವಳ ಚಿಕ್ಕ ಮಗಳು ಪುಟ್ಟು ಏನೊಂದೂ ತಿಳಿಯದೆ ಅಲ್ಲಿ ತಿರುಗಾಡುತ್ತಿದ್ದಳು, ಪ್ರವೀಣ ಅಲ್ಲೆ ಹೊರಗೆ ಕುಳಿತುಕೊಂಡಿದ್ದ.

ನಾರಾಯಣ ಹೊರಗೆ ಬಂದು ಮಗನನ್ನು ನೋಡಿದ. ಅವನನ್ನು ಪ್ರತಿದಿನವೂ ಮುದ್ದಿಡುತ್ತಿದ್ದ. ಆದರೆ ಇಂದು ಅವನನ್ನು ಮುಟ್ಟಲಿಕ್ಕೆ ಕೂಡ ನಾರಾಯಣನಿಗೆ ಮನಸ್ಸಾಗಲಿಲ್ಲ. ಮುತ್ತ ತನ್ನ

ಮೇಲೆ ಸಂಶಯ ಪಟ್ಟಿದ್ದರೂ ಪಡದಿದ್ದರೂ, ತನ್ನ ಕೃತ್ಯ ಹೊರ ಬಿದ್ದರೆ ತನ್ನ ಮಗನು ಕೂಡಾ ತನ್ನನ್ನು ಮರೆತು ಬಿಡದಿರಲಿಕ್ಕಿಲ್ಲವೆಂದು ಅವನಿಗೆ ತೋರಿತು. ಮಕ್ಕಳು ಮರಿಗಳು ಎಲ್ಲರೂ ಹಗೆ ಕಟ್ಟಿಕೊಳ್ಳುವರು. ಮುಯ್ಯಿಯನ್ನು ತೀರಿಸಿ ಕೊಳ್ಳುವವರು. ಇವನೇನಾದರೂ ತನ್ನಪ್ಪನೆಂದು ತನ್ನನ್ನು ಕ್ಷಮಿಸಲಿಕ್ಕಿಲ್ಲ. ಇವನ ತಾಯಿ ತನ್ನ ಮೇಲೆ ಉರಿದು ಬಿದ್ದರೆ ಇವನೂ ಅವಳೊಡನೆ ಹೋಗುವವ. ಮತ್ತೆ ತಂದೆ ಮಗನೆಂಬ ಬಾಂಧವ್ಯ ಏನಿದೆ? ತಾನೂ ತನ್ನ ತಂದೆಯನ್ನು ಕಡೆಗಣಿಸಿದವ, ತಿರಸ್ಕರಿಸಿದವ. ತನ್ನ ಮಗನೂ ತನಗೆ ಹಾಗೆಯೇ ಮಾಡಿದರೆ ಅದರಲ್ಲೇನೂ ಆಶ್ಚರ್ಯವಿರಲಾರದು. ಕ್ಷಣದಲ್ಲೂ ಅವನ್ನು ತನ್ನ ಕಡು ವೈರಿಯೆಂದು ಪರಿಗಣಿಸಬಹುದು. ಅವನ ತಾಯಿಯೇ ಅವನಲ್ಲಿ ಅಂಥ ಭಾವನೆಯನ್ನು ಹುಟ್ಟಿಸಬಹುದು.

ಪ್ರವೀಣ ನಾರಾಯಣನ ಬಳಿಗೆ ಎದ್ದು ಬಂದು ಅವನ ಕೈಗಳನ್ನು ಹಿಡಿದು ಕೊಂಡ. ನಾರಾಯಣ ಅವನನ್ನು ಹೆಗಲ ಮೇಲೇರಿಸಿದ.

"ನಾ, ಮೋಟ್ರು ಬಿಡ್ತೇನ್ಪ ಅಪ್ಪ. ಪ್ಯೊಂಯ್ ಪೋಂಯ್" ಎನ್ನುತ್ತ ಅವನು ನಾರಾಯಣನ ಕಿವಿಗಳನ್ನು ತನ್ನ ಪುಟ್ಟ ಬೆರಳುಗಳಿಂದ ಹಿಡಿದು ಅತ್ತಿತ್ತ ತಿರುಗಿಸ ತೊಡಗಿದ.

"ನನ್ಗೆ ನೋವಾಗೋದಿಲ್ವೇನೋ ಮಂಗ!" ಎನ್ನುತ್ತ ನಾರಾಯಣ ಅವನನ್ನು ಕುತ್ತಿಗೆಯ ಮೇಲಿನಿಂದ ಕೆಳಗಿರಿಸಿ ಮುಖಕ್ಕೊಂದು ಮುತ್ತನಿಟ್ಟ.

"ನೀವು ಮೋಟ್ರಿನಲ್ಲಿ ಕೂತ್ಕೊಂಡು ಹಾಗೇ ಮಾಡೋದಿಲ್ವೆ? ನಾ, ಮಾಡಿದ್ದೇನು ನಿಮ್ಗೆ? ನನ್ಗೂ ಒಂದು ಮೋಟ್ರು ತಂದ್ಕೊಡಿ" ಎಂದು ಪ್ರವೀಣ ಚಡಪಡಿಸಿದ.

"ಸರಿ. ಆದೀತಪ್ಪ"

ಎನ್ನುತ್ತ ಅವನನ್ನು ಕೆಳಗಿರಿಸಿ ನಾರಾಯಣ ಸ್ನಾನಮಾಡಲಿಕ್ಕೆ ಹೋದ. ಅವನ ಮೈಯ್ಯಲ್ಲಿ ತುಂಬಾ ಕೊಳೆಯಿತ್ತು. ಅಂಗಿ ವಸ್ತ್ರಗಳೆಲ್ಲ ಬೆವರಿನಿಂದ ನಾರುತ್ತಿದ್ದುವು. ಅವನ್ನೆಲ್ಲ ತೊಳೆದು ಸ್ನಾನದ ಮನೆಯಿಂದ ಹೊರಡುವಾಗ ಮಧ್ಯಾಹ್ನವಾಗಿತ್ತು.

ಅಂದು ಅವನಿಗೆ ಊಟವೂ ಸೇರಲಿಲ್ಲ. ಅನ್ನದ ಅಗಳನ್ನು ಬಾಯಿಯೊಳಗೆ ತುರುಕಿಸುವಾಗ ಒಂದೆರಡು ಸಲ ವಾಂತಿಯೂ ಬಂತು. ಊಟಮಾಡುವಾಗ ರುಕ್ಕು ಅವನೊಡನೆ ಹೆಚ್ಚಿಗೆ ಮಾತಾಡಲಿಲ್ಲ.

ಕೊನೆಗೆ ಅವನಿಗೆ ತಾನು ಹಿಂದಿನ ದಿನ ಕಂಡ ಶವದ ನೆನಪಾಯಿತು. ಆ ರಕ್ತ, ಆ ಜೋಲುತ್ತಿದ್ದ ಮಾಂಸ, ಆ ದುರ್ವಾಸನೆ—ಇವೆಲ್ಲ ಅವನ ಕಣ್ಣುಮುಂದೆ ನಿಂತಂತಾಯಿತು. ಅವನು ಹೇಸಿಗೆಯಿಂದ ಉಂಡದ್ದನ್ನೆಲ್ಲ ಹಿಂದೆ ಕಾರಿದ. ಮುಖ ತೊಳೆದು ಒಳಗೆ ಹೋಗಿ ಮಲಗಿಕೊಂಡ.

ಹಿಂದಿನ ದಿನ ಕಂಡಿದ್ದ ಹೆಣದ ಸ್ವರೂಪವನ್ನು ಮರೆಯುವುದು ಅಸಾಧ್ಯವಾಯಿತವನಿಗೆ. ಅದರ ರಕ್ತ ಮಾಂಸಗಳು ಇನ್ನೂ ಅವನಲ್ಲಿ ಜೀವಂತ ಪ್ರತಿಕ್ರಿಯೆಯನ್ನುಂಟು ಮಾಡುತ್ತಿದ್ದುವು. ಮೂಗಿನಲ್ಲಿ ಅವುಗಳ ವಾಸನೆ, ಕಣ್ಣಿನಲ್ಲಿ ಅವುಗಳ ರೌದ್ರವತೆಗಳು ಮನೆ ಮಾಡಿದಂತಾಗಿತ್ತು ಅವನಿಗೆ.

ಈ ಒಂದು ಸತ್ತ ಹೆಣಕ್ಕಾಗಿ ತಾನಿಷ್ಟು ಪರಿತಪಿಸುತ್ತಿರುವೆನಲ್ಲಾ ಎಂದು ಅವನಿಗಾಗ ತೋರಿತು. ಅಪಘಾತವೆಂದಾದ ಬಳಿಕ ಅದಕ್ಕೆ ಕಾರಣನಾದ ಅಪರಾಧಿಯನ್ನು ಹುಡುಕದೆ ಪೋಲೀಸರು ಬಿಡಲಾರರು. ಪೋಲೀಸರು ಬಿಟ್ಟರೂ ಜನರು ಏನಾದರೊಂದನ್ನು ಹೇಳಿಕೊಳ್ಳದೆ ಬಿಡಲಾರರು.

ರುಕ್ಕು ಕೂಡಾ ತನ್ನೊಡನೆ ಸರಿಯಾಗಿ ಮಾತಾಡುತ್ತಿಲ್ಲ! ಬಹುಶಃ ಅವಳಿಗೆ ದುಃಖವೇ ವಿಶೇಷವಾಗಿರಲೂ ಬಹುದು. ಆದರೆ, ಅವಳಿಗೂ ತನ್ನಮೇಲೆ ಸಂಶಯ ಬಂದಿರಲೂ ಬಹುದೆ? ತಾನು ಯಾವಾಗಲೂ ಹಣಕ್ಕಾಗಿ ಬಾಯಿ ಬಿಡುತ್ತಿದ್ದವನೆಂಬುದು ಅವಳಿಗೆ ಚೆನ್ನಾಗಿ ಗೊತ್ತಿದ್ದುದೇ. ಅವಳ ತಂದೆ ಮಾಡಿಟ್ಟಿದ್ದ ಮರಣ ಶಾಸನದ ಕುರಿತೂ ತಾನು ಆಕೆಗೆ ಹೇಳಿ ನಲಿದಿದ್ದೆ. ಈಗ ಅವನಾದರೂ ಸತ್ತದ್ದು ಮೋಟಾರ್ ಅಪಘಾತದಿಂದಾಗಿ ಎಂಬುದು ಸಿದ್ಧವಾಗಿದೆ. ಅವಳಿಗೆ ಯಾರು ಏನನ್ನು ಹೇಳದಿದ್ದರೂ, ಈ ಮರಣಕ್ಕೆ ತಾನೇ ಕಾರಣವಾಗಿರಬೇಕೆಂದು ಹೊಳೆದಿರಬಹುದು. ಆದರೆ ಅವಳು ತನ್ನೊಡನೆ ಅದನ್ನು

ಹೇಳಿಲ್ಲ. ತನ್ನ ಅಣ್ಣನೊಡನೆ ಹೇಳಿರಲೂ ಸಾಕು. ಈ ಒಳಗೆ ಪೋಲೀಸರಿಗೆ ಈ ವರ್ತಮಾನ ತಲಪಿರಲೂ ಬಹುದು. ಅದು ಮಾವ ಸತ್ತ ದಿನ ತಾನು ಮನೆ ಸೇರುವಾಗ ಮಧ್ಯರಾತ್ರಿ ಕಳೆದಿತ್ತು. ಉದ್ವೇಗದಿಂದ ತನ್ನ ಮೈಯ್ಯೆಲ್ಲ ನಡುಗುತ್ತಿತ್ತು. ಮೈಯ್ಯೆಲ್ಲೆಲ್ಲ ಕೆಸರಾಗಿತ್ತು. ತನಗೆ ಅಂದು ಉಸಿರಾಡಲು ಕೂಡಾ ಆಗುತ್ತಿದ್ದಿಲ್ಲ. ತನ್ನ ಚರ್ಯೆಯಿಂದ ಆಕೆ ಆಗಲೇ ಸಂಶಯ ಪಟ್ಟಿರ ಬಹುದು. ಈ ಹೇಯ ಕೃತ್ಯವನ್ನು ಮಾಡಿದ ಬಳಿಕ ತಾನೆಲ್ಲೋ ತಪ್ಪಿಸಿ ಕೊಂಡು ಓಡಿಹೋಗಿದ್ದೆನೆಂದು ಭಾವಿಸಿರಬಹುದು. ಮರಣ ಶಾಸನವು ಕೂಡಲೇ ಕಾರ್ಯಗತವಾಗುವಂತೆ ತಾನು ಹೂಡಿದ ತಂತ್ರ ಇದೆಂದು ಆಕೆ ನೆನೆದಿರಬಹುದು. ಒಮ್ಮೆ ಆಕೆ ಹಾಗೆ ನೆನೆದಲ್ಲಿ ತನಗೆ ಮತ್ತೇನು ಉಳಿಯಿತು ? ಸತ್ತುದು ಆಕೆಯ ಪ್ರೀತಿಯ ತಂದೆ. ಅವನೇ ಆಕೆಯನ್ನು ಚಿಕ್ಕಂದಿನಿಂದಲೂ ಸಲಹಿದವ. ಮದುವೆಮಾಡಿಕೊಟ್ಟ ಬಳಿಕವೂ ತನ್ನ ಮಗಳೆಂದು ಆಕೆಯನ್ನು ವಾತ್ಸಲ್ಯದಿಂದ ಕಾಪಾಡಿದವ. ಅವಳಿಗೆ ಅಂಥ ತಂದೆ ಮೇಲೊ ತಾನು ಮೇಲೊ ? ತನ್ನ ತಂದೆಯನ್ನು ಹೀಗೆ ಮಾಡಿದವ ತನ್ನನ್ನೂ ಒಂದು ದಿನ ಹೀಗೆ ಮಾಡಲಿಕ್ಕಿಲ್ಲವೇ ಎಂದು ಆಕೆ ನೆನೆಸದಿರಲಿಕ್ಕಿಲ್ಲ. ಮತ್ತೆ ಅವಳಿಗೆ ತಾನು ಏನಾದರೆ ಏನು ? ಎಲ್ಲಿಂದಲೋ ಅವಳ ಬಳಿಗೆ ಬಂದವ. ಎಲ್ಲಿಗೋ ಇನ್ನು ಹೋಗುವವ.

ತನ್ನೊಳಗೇ ನಾರಾಯಣ ಹೀಗೆಯೇ ಯೋಚಿಸುತ್ತಿದ್ದಾಗ ರುಕ್ಕು ಪುಟ್ಟುವನ್ನು ಹಿಡಿದುಕೊಂಡು ಬಂದು ಅವನ ಬಳಿಯಲ್ಲಿ ಕುಳಿತು ಅವನ ಹಣೆಯನ್ನು ಮುಟ್ಟಿ ನೋಡಿದಳು. ಅವನು ಆಗ ಕಣ್ದೆರೆದು ಅವಳನ್ನು ನೋಡಿದ.

"ನಿಮಗೇನು ಸೌಖ್ಯವಿಲ್ಲವೆ ? ಜ್ವರ ಬರುತ್ತಿರುವಂತೆ ಕಾಣುತ್ತಿದೆಯಲ್ಲ ? " ಎಂದು ಆಕೆ ಕೇಳಿದಳು.

"ಹೂಂ. ಏನೂ ಇಲ್ಲ. ರಾತ್ರಿ ನಿದ್ದೆಯಿಲ್ದೆ ಏನೋ ವಾಂತಿ ಮಾಡ್ಬಿಟ್ಟೆ. ಅಷ್ಟೆ. ಹೊಟ್ಟೇಲಿ ಪಿತ್ತ ಕುದಿಯುತ್ತಿರ್ಬೇಕು."

"ಏನಾದ್ರೂ ಕಷಾಯ ಕೊಡಲೇ ?"

"ಏನೂ ಬೇಡ," ಎನ್ನುತ್ತ ಅವನು ಪುಟ್ಟುವನ್ನು ಎತ್ತಿಕೊಂಡು ತನ್ನ ಹೊಟ್ಟೆಯ ಮೇಲೆ ಕೂರಿಸಿಕೊಂಡ.

ರುಕ್ಕು ಪುನಃ ಅವನ ಮುಖದ ಮೇಲೆ ಕೈ ಸವರಿದಳು. ಎರಡು ದಿನ ಬೆಳೆದ ಅವನ ಗಡ್ಡ ಮುಳ್ಳಿನಂತೆ ಅವಳ ಕೈಗೆ ತಗಲುತ್ತಿತ್ತು.

ಅವನು ಅವಳ ಭಾವನಾಮಯವಾದ ಕಣ್ಣುಗಳನ್ನೊಮ್ಮೆ ನೋಡಿದ. ಅವುಗಳಲ್ಲಿದ್ದ ನಿಷ್ಕಲ್ಮಷತೆ ಅವನ ಎದೆಯನ್ನೇ ತಿವಿಯಿತು. ಅವುಗಳಲ್ಲಿ ತುಂಬು ಆಶಾವಾದವಿತ್ತು. ಮನೋವಿಶ್ವಾಸವಿತ್ತು.

ನಾರಾಯಣನಿಗೆ ಹೋದ ಜೀವ ಬಂದಂತಾಯಿತು. ಏನಾದರೂ ತನ್ನ ಹೆಂಡತಿ ಇನ್ನೂ ತನ್ನ ಬೆಂಬಲಕ್ಕೆ ಇದ್ದಾಳಲ್ಲಾ ಎಂದು ಅವನಿಗೆ ಹೊಳೆಯಿತು. ಅವಳಿಗೆಂದೂ ತನ್ನ ಅಪರಾಧ ತಿಳಿಯಲಿಕ್ಕಿಲ್ಲ., ತಿಳಿದರೂ ಅವಳು ನಂಬಲಿಕ್ಕಿಲ್ಲವೆಂದು ಅವನು ಧೈರ್ಯಗೊಂಡ.

ಪುಟ್ಟು ಅವನ ಸಣ್ಣ ಮೀಸೆಯನ್ನು ಹಿಡಿದು ತನ್ನ ಪುಟ್ಟ ಬೆರಳುಗಳಿಂದ ಎಳೆಯುತ್ತಿದ್ದಳು.

೬

ಮರುದಿನ ಬೆಳಗ್ಗೆ ನಾರಾಯಣ ಬಸ್ಸಿನ ನಿಲುಮನೆಗೆ ಹೋದ. ಅಷ್ಟರಲ್ಲೇ ಅವನ ಬಸ್ಸನ್ನು ನಡೆಸಲು ಇನ್ನೊಬ್ಬನನ್ನು ನಿಯೋಜಿಸಿಯಾಗಿತ್ತು. ಅಲ್ಲಿದ್ದ ಗುಮಾಸ್ತ ನಾರಾಯಣನು ರಜೆ ಪಡೆಯದೆ ಕೆಲಸಕ್ಕೆ ಬಾರದಿದ್ದುದಕ್ಕಾಗಿ ಕೋಪದಲ್ಲಿ ಎರಡು ಮಾತುಗಳನ್ನಾಡಿದ. ನಾರಾಯಣನಿಗೂ ಆಗ ಸಿಟ್ಟು ಬಂತು.

"ಏನ್ರೀ ? ಏನೇನು ಮಾತಾಡ್ತೀರಲ್ಲ ? ನಿಮ್ಮಂತೆ ನಮ್ಗೂ ತಂದೆ ಬಂಧು ಬಳಗ ಇದ್ದಾರೆ ? ನನ್ನ ಹೆಂಡ್ತಿಯ ತಂದೆ ತೀರಿಕೊಂಡ. ಅದಕ್ಕಾಗಿ ನಾನು ಒಂದು ದಿನವೂ ಮನೇಲಿರ್ಬಾರ್ದೆ ?"

"ನಮ್ಗೇನು ಯಾರು ಸತ್ತರೆ ?" ಗುಮಾಸ್ತ ಪ್ರತಿಭಟಿಸಿದ. "ನಮ್ಗೆ ಬೇಕಾದ್ದು ಕೆಲಸಕ್ಕೆ ಜನ. ನಾನು ಬರೋದೆ ಇಲ್ಲವೆಂದು

ನೀನು ಮುಂಚೆಯೇ ಹೇಳಿ ಬಿಡುತ್ತಿದ್ದರೆ ಎಷ್ಟು ಒಳ್ಳೆಯದಾಗುತ್ತಿತ್ತು!"

"ಆಪತ್ತು ಎಲ್ರಿಗೂ ಸಂಭವಿಸ್ತದೆ ನೋಡ್ರಿ. ನಾವೇನೂ ಬೇಕ್ಬೇಕೆಂದೇ ಮನೇಲೀ ಕೂತ್ಕೊಳ್ಳೋದಿಲ್ಲ. ನೀವೂ ಸ್ವಲ್ಪ ಮನುಷ್ಯರಂತೆ ಗ್ರಹಿಸ್ಬೇಕು. ಆ ಮೇಲೆ ಮಾತಾಡ್ಬೇಕು."

"ಸಾಕೋ ನಿನ್ನ ಬುದ್ಧಿವಾದ. ನೀನು ಇವತ್ತು ಉಡುಪಿಯ ಬಸ್ಸನ್ನು ಕೊಂಡು ಹೋಗಬೇಕು. ಇವತ್ತು ರಾತ್ರಿ ಅಲ್ಲೇ ಹಾಲ್ಟ್."

"ಚಿಂತೆಯಿಲ್ರೀ. ಯಾವಾಗ ಈ ದುಡಿತದ ಕೆಲ್ಸಕ್ಕೆ ಸೇರಿದ್ವೋ ಅಂದೇ ಅನ್ನ ಬಿಡೋ ಪ್ರತಿಜ್ಞೆ ನಾವು ಮಾಡಿದ್ವೇವೆ. ಉಡುಪಿಗಲ್ಲಿದ್ರೆ ಜಪಾನಿಗೆ ಬೇಕಾದ್ರೆ ಕಳ್ಸಿ. ನನ್ಗೇನು?"

ಎನ್ನುತ್ತ ನಾರಾಯಣ ಬಸ್ಸಿನ ಬಳಿಗೆ ಹೋದ.

"ಈಗ ಕಾರ್ಕಳಕ್ಕೆ ಹೋಗಿ ಬರ್ಬೇಕು. ಮತ್ತೆ ಉಡುಪಿಗೆ ಹೋಗುವುದು," ಎನ್ನುತ್ತಿದ್ದ ಗುಮಾಸ್ತ, ಆಗ.

ನಾರಾಯಣ ಬಸ್ಸನ್ನೇರಿ ಕುಳಿತುಕೊಂಡ. ಅದರ ಕಂಡಕ್ಟರ್ ಜುವಾನ ಎದುರಲ್ಲಿ ಹ್ಯಾಂಡ್ಲ್ ಹೊಡೆದ. ಹತ್ತಿಪ್ಪತ್ತು ಸುತ್ತು ತಿರುಗಿದ ಬಳಿಕ ತಾನೇ ಎಂಜಿನು ನಡೆಯತೊಡಗಿತು.

ಬಸ್ಸಿನ ನಿಲ್ದಾಣದಲ್ಲಿ ಕೂಲಿಗಳ ಮತ್ತು ಪ್ರಯಾಣಿಕರ ಗಲಾಟೆಯಾಗುತ್ತಿತ್ತು. ಅಂದು ನಾರಾಯಣನೊಬ್ಬನೇ ಹೋಟೇಲಿಗೆ ಹೋಗಿ ಕಾಫಿ ಕುಡಿದ. ಅಲ್ಲಿಂದ ಹಿಂದಿರುಗುವಾಗ ಅವನಿಗೆ ಮೋನಪ್ಪ ಕಾಣಸಿಕ್ಕಿದ. ಅವನ ಬಸ್ಸೂ ಅಲ್ಲಿಗೆ ಬಂದಿತ್ತು.

"ನಾರಾಯಣಣ್ಣಾ, ಎಲ್ಲ ಮುಗಿಯಿತೇ ?" ಎಂದು ಅವನು ಕೇಳಿದ.

"ಹೌದು. ಇವತ್ತು ನಮ್ಮ ಸರ್ವಿಸನ್ನು ಯಾರು ಕೊಂಡು ಹೋಗ್ತಿದ್ದಾರೆ?" ಎಂದು ನಾರಾಯಣ ಕೇಳಿದ.

"ಸ್ಯಾಬರು, ನಿನ್ನೆ ಒಂದು ಕಡೆ ಪೆಟ್ರೋಲ್ ಬಾರದೆ ನಾವು ಪಟ್ಟ ಪೇಚಾಟ ಅಷ್ಟಿಷ್ಟಲ್ಲ. ಕಡೆಗೆ ಹೇಗೋ ಎರಡು ಗಂಟೆ ತಡವಾಗಿ ಬಂದೆವು."

"ಅದ್ರ ಕಾರ್ಬೆಟ್ರೆ ಹಾಳಾಗಿದೆ. ಪೆಟ್ರೋಲ್ ಏನು ಮಾಡಿದ್ರೂ ಅದ್ರೊಳ್ಗೆ ಸರಿಯಾಗಿ ಹೋಗೋದಿಲ್ಲ."

"ಏನೋ ಪೈಪಿನಲ್ಲಿ ಕಸವೂ ಇತ್ತು."

"ನಾನು ಸಿಟ್ಟರಿಗೆ ಹೇಳಿ ಎಷ್ಟು ದಿನವಾಯ್ತು ! ಅವ್ರಿಗೇನು ಯಾರಾದ್ರು ದಾರಿಯಲ್ಲಿ ಬಿದ್ರೆ ? ಇಂಥ ಸೋಮಾರಿಗ್ಳನ್ನು ನಾನು ಈ ತನ್ಕ ಕಂಡಿಲ್ಲ. ಎಲ್ಲ ಬಿಟ್ಟು ಅವ್ರಿಗೆ ಕೆಲ್ಸ ಮಾಡೋಕೆ ಕೂಡಾ ತಿಳಿಯೋದಿಲ್ಲ ! ಎಂಥ ಕೆಲ್ಸದವ್ರು !"

"ಈಗ ಕ್ಲಚ್ಚೂ ಸ್ವಲ್ಪ ಹಾಳಾಗಿದೆ. ಗೇರ್ ಹಾಕುವಾಗ ಗರ್ರ್ ಎಂದು ಶಬ್ದವಾಗುತ್ತದೆ."

"ಮತ್ತೆ ಆ ಸ್ಯಾಬನ ಕೈಲಿ ಸಾಧಾರಣದ ಎಂಜಿನು ಉಳ್ದೀತೇ ? ಏನು ಸ್ಪೀಡು ಅವನದು ! ಕಲ್ಲು ಮುಳ್ಳು ಎಂದು ನೋಡ್ದೆ ಕೊಂಡ್ಹೋಗ್ತಾನೆ. ನನ್ನ ಹಿಂದಿನ ಒಂದು ಬಸ್ಸಿನ ಎಂಜಿನನ್ನೇ ಅವನು ಒಡೆದ್ಬಿಟ್ಟಿದ್ದ."

"ಇವತ್ತು ಉಡ್ಪಿಗೇ ಅಣ್ಣಾ ? "

"ಹೂಂ. ಇವತ್ತು ಹಾಲ್ಟೂ ಅಲ್ಲಿಯೇ. ಆ ಕ್ಲಾರ್ಕರಿಗೆ ಏನೆನ್ಬೇಕು ? ಎಲ್ಲೋ ಮೂಲೇಲಿ ಇದ್ದವುಗ್ಳನ್ನು ಇಲ್ಲಿ ತಂದ್ಹಾಕಿ ನಮ್ಗೆ ಪ್ರಾಣಸಂಕ್ಟಮಾಡಿಸ್ತಾರೆ".

"ಹಾಗಾದ್ರೆ ನಾಳೆ? "

"ನಾಳೆಯೂ ಇಲ್ಲ. ಬಹುಶಃ ನಾಡ್ದು. ಅಲ್ಲಿ ಪೈಗಳ ಹತ್ರ ಹೇಳ್ಬಿಡು."

"ಹೂಂ. ಬರ್ತೇನೆ".

ನಾರಾಯಣ ಬಸ್ಸನ್ನೇರಿ ಕುಳಿತ. ಪ್ರಯಾಣಿಕರೆಲ್ಲ ಆಗಲೇ ಅದರಲ್ಲಿ ಕುಳಿತಿದ್ದರು. ಬಸ್ಸು ಹೊರಟಿತು.

ಮುಂದಿನ ಸೀಟಿನಲ್ಲಿ ಕುಳಿತುಕೊಂಡಿದ್ದವನೊಬ್ಬ ನಾರಾಯಣ ನಿಗೆ ಒಂದು ಸಿಗರೇಟನ್ನಿತ್ತು.

"ಇದು ಕಾನೂನಿಗೆ ವಿರುದ್ಧ ಸ್ವಾಮಿ" ಎಂದು ನಾರಾಯಣ ನಗುತ್ತ ಅದನ್ನು ತೆಗೆದುಕೊಂಡ.

"ಇದು ಡೀಸಲ್ ಬಸ್ಸು ಅಲ್ಲವೆ? " ಪ್ರಯಾಣಿಕನೆಂದ.

"ಆದ್ರೆ ಇಲ್ಲಿ ಬೋರ್ಡು ಹಾಕಿದ್ದಾರೆ ನೋಡಿ. ಡ್ರೈವರನೊಡನೆ ಸಂಭಾಷಣೆ ಮಾಡಬೇಡ್ರಿ; ಮತ್ತು ಬಸ್ಸಿನೊಳ್ಗೆ ಹೊಗೆ ಬತ್ತಿ ಸೇದು ವುದನ್ನು ನಿಷೇಧಿಸಲಾಗಿದೆ ಎಂದು. ಮಾತ್ರ ಎಲ್ಲ ಕಾನೂನೂ ಇಷ್ಟೆ ಅಲ್ವೆ ಸ್ವಾಮಿ? ಇಲ್ವಾದ್ರೆ ಡ್ರೈವರ್ನೊಡ್ನೆ ಮಾತಾಡ್ಬಾರ್ದೇಕೆ? ಅವನು ಮನುಷ್ಯನಲ್ವೇ?"

"ಇದೆಲ್ಲ ಕಂಪೆನಿ ಕಾನೂನು"

"ಏನೋ ಯಾರಿಗೆ ಗೊತ್ತು? ದಿನಕ್ಕೊಂದು ಬೋರ್ಡು ಹಾಕ್ತಾರೆ ಇಲ್ಲಿ. ಮತ್ತೆ ಅದನ್ನು ಕೇಳುವವ್ರಿಲ್ಲ. ಗ್ಯಾರೇಜಿನಲ್ಲಿ ಬೇಕಾದಷ್ಟು ಮಂದಿ ಬೋರ್ಡು ಬರೆಯುವವ್ರು ಇದ್ದಾರೆ. ಅವ್ರಿಗೆ ಬೇರೇನು ಕೆಲ್ಸ?"

"ಅದು ನಿಜ ಹ್ಹ! ಹ್ಹ!" ಎಂದು ಆ ವ್ಯಕ್ತಿ ನಕ್ಕಿತು.

ಬಸ್ಸು ಸಾಗುತ್ತಿದ್ದಂತೆಯೇ ನಾರಾಯಣ ಸಿಗರೇಟಿಗೆ ಬೆಂಕಿ ಹಚ್ಚಿಸಿ ಅದನ್ನು ಸೇದತೊಡಗಿದ.

"ನೀನು ಈ ಲೈನಿಗೆ ಹೊಸಬನೆಂದು ತೋರುತ್ತದೆ, ಅಲ್ಲವೆ?" ಎಂದು ಆ ವ್ಯಕ್ತಿ ಪ್ರಶ್ನಿಸಿತು.

"ಹೊಸಬ್ನೇನು ಸ್ವಾಮಿ, ಹಳಬ್ನೇನು? ಈಗ ಎಲ್ಲ ತಿರ್ಗು ಮುರ್ಗಾಗಿದೆ. ಇಂಥವನಿಗೆ ಇದೇ ಬಸ್ಸು, ಇದೇ ಲೈನು ಎಂಬ ವಿಧಿ ಯಿಲ್ಲ. ಅವರವ್ರ ಹಣೇಬರದಲ್ಲಿದ್ದಲ್ಲಿಗೆ ಅವರವ್ರು ಹೋಗ್ತಾರೆ. ಅದೆಲ್ಲ ಮುಂಚೆ, ಯುದ್ಧಕ್ಕೆ ಮುಂಚೆ"

"ನಿಮ್ಮ ಸ್ಟ್ರೈಕಿನಿಂದಾಗಿ ಇದೆಲ್ಲ ಆದ್ದದ್ದೆಂತ ತೋರುತ್ತದೆ ಅಲ್ಲವೆ?"

"ಸ್ಟ್ರೈಕ್ ಏನು ಸ್ವಾಮಿ?" ನಾರಾಯಣ ಕೇಳಿದ. "ಕಂಪ್ನಿ ಯವ್ರಿಗೆ ಹಣ ಮಾಡ್ಲಿಕ್ಕೆ ಅದೊಂದು ಕಾರಣವಾಯ್ತು ಅಷ್ಟೆ. ನಾನು ಈ ಕೆಲ್ಸಕ್ಕೆ ಸೇರಿ ಇಪ್ಪತ್ತು ವರ್ಷವಾಯ್ತು. ನಮ್ಗೇನೋ ತಿಂಗ್ಳ

ಗೊಮ್ಮೆ ಒಂದಿಷ್ಟು ಸಂಬ್ಳ ಕೊಡ್ತಾರೆನ್ನಿ. ನಮ್ಗೂ ಹೀಗೆಯೇ ಹಣ ಮಾಡ್ಲಿಕ್ಕೂ ಸಾಧ್ಯವಿದೆ. ಆದ್ರೆ ಈ ಕೆಲ್ಸಕ್ಕೆ ಕೈಹಾಕಿದ್ರೆ ಸಾಕು. ಮತ್ತೆ ಅವ್ನ ಜೀವ್ನ ಅಲ್ಲಿಗೇ ನಿಂತಂತೆಯೇ. ಇದ್ರಿಂದ ಯಾರೂ ಒಳ್ಳೆಯವರಾದ್ದೆಂದಿಲ್ಲ. ಏನೋ ಮೋಟ್ರು ಮೋಟ್ರು ಎನ್ನುತ್ತ ಎಲ್ರೂ ಕುಣಿಯ್ತಾರೆನ್ನಿ. ಈ ಲೈನ್ ಕಂಡಕ್ಟರುಗಳು ಮಾಡಿದ ಹಣ ವೆಷ್ಟಾಗ್ಬಹುದು ? ಆದ್ರೆ ಕೆಲ್ಸ ಬಿಟ್ಟ ಮರುದಿನ ಅವ್ರು ಬೇಡ್ಲಿಕ್ಕೇ ಹೋಗ್ಬೇಕಷ್ಟೆ ! ಹಣ ಮಾಡೋದು ಹಣ ಹಾಕಿದೋವ್ರು ವಿನಃ ಹಣ ವನ್ನು ಉತ್ಪತ್ತಿ ಮಾಡುವ ನಾವಲ್ಲ. ಕಂಪನಿಯೆಂದರಾಯಿತು. ಅದ ಕ್ಕೆಷ್ಟುಮಂದಿ ಪಾಲುದಾರರು, ಎಷ್ಟುಮಂದಿ ಡೈರೆಕ್ಟರರು ! ಅವ್ರಿಗೆ ವರ್ಷಕ್ಕೆ ನೂರಕ್ಕೆ ಐನೂರು ಲಾಭ ದೊರೆಯ್ತದೆ. ಹೋಗ್ಲಿಕ್ಕೆ ಬರ್ಲಿಕ್ಕೆ ಅವರಿಗೆ ಧರ್ಮಾರ್ಥ ಪಾಸ್ ಇದೆ. ಡೈರೆಕ್ಟರುಗಳಿಗೆ ಕಂಪೆ ನಿಯ ಕಾರಿದೆ. ಕಂಪೆನಿಯೇ ಕಟ್ಟಿಸಿರುವ ಮನೆಗಳಿವೆ. ಆದ್ರೆ ನಮ್ಗೆ ಮಾತ್ರ ಸಿಗುವ ಬಡ್ತಿಯೆಂದ್ರೆ ಹತ್ರುಪಾಯಿಯಿಂದ ಹದ್ನೈದಕ್ಕೆ. ಅದಕ್ಕೆ ಮೀರಿ ನಾವು ಕೇಳಿದ್ರೆ ನಮ್ಮೆಲ್ಸ ಹೋದಂತೆಯೇ ! ಮೊನ್ನೆ ನೋಡಿ ಸ್ಟ್ರೈಕ್ ಆಯ್ತು. ಆದ್ರಲ್ಲಿ ಸೋತವ್ರು ಯಾರು ? ನಾವೇ ! ನಮ್ಮಲ್ಲಿ ಹಲವ್ರನ್ನು ಕೆಲ್ಸದಿಂದ ತೆಗೆದುಹಾಕಿದ್ರು. ಕೆಲವ್ರ ಸಂಬ್ಳ ಕಡಿಮೆ ಮಾಡಿದ್ರು. ಅವ್ರಮೇಲೆ ಕೆಲವ್ರಿಗೆ ಪೋಲೀಸರಿಂದ ಹೊಡ್ಸಿದ್ರು. ಈಗ ನಮ್ಮಲ್ಲಿ ಸ್ಟ್ರೈಕಿನ ಸುದ್ದಿ ಎತ್ತುವವರೇ ಇಲ್ಲ. ಬೋನಸ್ ಕೇಳುವವ್ರು ಇಲ್ವೇ ಇಲ್ಲ. ಏನೋ ಎಲ್ಲ ಪಾರ್ಟಿ ಪಾರ್ಟಿಯೆಂದು ನಾವೆಲ್ಲ ಒದ್ದಾಡಿದೆವು. ಕೆಲವ್ರನ್ನು ಕಂಪೆನಿಯವ್ರು ಜೈಲಿಗೆ ಕಳಿಸಿದ್ರು. ಕೆಲವರು ಲಂಚ ತಿಂದು ಸುಮ್ನೆ ಕುಳಿತರು. ಕಂಪ್ನಿಯವ್ರು ಖರ್ಚು ಮಾಡಿದ್ದು ಪೋಲೀಸರಿಗೆ ಮತ್ತು ಒಳಸಂಚುಕಾರ್ರಿಗೆ ಲಂಚ ಕೊಡ್ಲಿ ಕ್ಕಾಗಿ ಮಾತ್ರ. ಈಗ ಬಸ್ಸುಗಳೇ ಸರಿಯಾಗಿ ನಡೆಯೋದಿಲ್ಲ. ಒಂದ್ನೆ ಸರಿಯಾಗ್ಬಾಗ ಇನ್ನೊಂದು ಹಾಳಾಗ್ತದೆ. ಎಲ್ಲ ಹಳೇ ಸಾಮಾನು ಗಳನ್ನೇ ಸರಿಮಾಡಿ ಹಾಕ್ತಾರೆ. ಅವು ಅರ್ಧದಾರಿಯಲ್ಲಿ ಹಾಳಾಗಿ, ಮೋಟ್ರನ್ನು ನಿಲ್ಲಿಸುತ್ತವೆ. ನಮ್ಮ ಈಗಿನ ಜವಾಬ್ದಾರಿ ಬಸ್ಸು ಸರಿ

ಯಿದ್ರೆ ಅದನ್ನು ನಡೆಸೋದು. ಹಾಳಾದ್ರೇ ಅದನ್ನು ಅಲ್ಲೇ ಬಿಡೋದು. ಇಷ್ಟೆ. ನಾವೇನಾದ್ರೂ ಹೆಚ್ಚು ಮೆಹನತ್ತಿನಿಂದ ಬಸ್ಸನ್ನು ನಡೆಸಿದ್ರೆ ನಮ್ಗೇನೂ ಪ್ರಯೋಜನವಿಲ್ಲ."

"ಸ್ಟ್ರೈಕಿಗೆ ನೀನೂ ಸೇರಿದ್ದಿಯೋ ?"

"ಮೊದಲಿನ ಒಂದು ದಿನ ಸೇರ್ಲಿಲ್ಲ. ಮತ್ತೆ ಒಳ್ಗೆ ಹೋಗೋದೇ ಅಸಾಧ್ಯವಾಯ್ತು. ಆದ್ರೆ ಕಂಪ್ನಿಯವ್ರಿಗೆ ನನ್ಮೇಲೆ ಕಣ್ಣಾಗಿದೆ. ನನ್ನವೇನಾದ್ರೂ ತಪ್ಪು ಸಿಕ್ಕಿದ್ರೆ ಕೂಡ್ಲೆ ನನ್ನನ್ನು ಕೆಲ್ಸದಿಂದ ತೆಗೆದು ಹಾಕುತ್ತಾರೆ."

"ಸ್ಟ್ರೈಕ್ ಮಾಡಿದರೆ ಎಲ್ಲರಿಗೂ ಉಪದ್ರವವಾಗುತ್ತದಲ್ಲ! ನಾನು ಆ ಸಮಯ ಒಂದುಕಡೆ ಹೋಗಿದ್ದವ ಮೂರುದಿನ ಅಲ್ಲೇ ಉಳಿಯಬೇಕಾಯಿತು. ಮತ್ತೆ ಟ್ಯಾಕ್ಸಿ ತರಿಸಿ ಅದರಲ್ಲಿ ಬರಬೇಕಾಯಿತು !"

"ಆಗಿರ್ಬಹುದು ಸ್ವಾಮಿ. ಆದ್ರೆ ನಮ್ಮ ಸುಖ ಕಷ್ಟ ಯಾರಿಗೆ ಗೊತ್ತಾಗ್ತದೆ ? ಪ್ರಯಾಣಿಕರು ನಮ್ಮನ್ನು ಪಶುಗಳಂತೆ ನೋಡ್ತಾರೆ. ಕಂಪ್ನಿಯವ್ರಿಗೆ ನಮ್ಮ ಮೇಲೆ ಯಾವಾಗ್ಲೂ ಸಂಶಯ. ಅವ್ರು ಮರ ಸುಟ್ಟು ಇದ್ದಿಲು ಹಾಕಿ ಬಸ್ಸನ್ನು ನಡೆಸಿಯೂ ಲಾಭ ಮಾಡಿಕೊಳ್ತಾರೆ. ಆದ್ರೆ ಬೆವ್ರು ಸುರಿಸ್ಬೇಕಾದೋರು ನಾವು. ಈ ಬಿಸಿ ಎಂಜಿನಿನ ಮುಂದೆ ದಿನಾಲೂ ಕುಳಿತುಕೊಂಡರೆ ಎಷ್ಟುದಿನ ನಾವು ಬದುಕ್ಬಹುದು ? ಒಂದು ಗಂಟೆಗೊಮ್ಮೆ ಕಾಫಿ ಕುಡಿಯದೆ ನಮ್ಗೆ ಆಗೋದಿಲ್ಲ. ಊಟವಂತೂ ಹೋಟೇಲಲ್ಲೇ. ಯೂನಿಫಾರ್ಮು ಸರಿಯಾಗಿಲ್ಲಿದ್ರೆ ಪೋಲೀಸರು ಚಾರ್ಜ್ ಮಾಡ್ತಾರೆ. ನಮ್ಗೂ ಮನೆ–ಮಕ್ಳು ಇದೆಯಲ್ಲ? ಒಂದು ದಿನಾ ರಜೆ ಇಲ್ದೆ ಎಷ್ಟು ದುಡಿಯ್ಬಹುದು? ಇಷ್ಟು ದುಡಿದು ಕೆಲ್ಸ ಬಿಟ್ಟು ಹೋಗುವಾಗ ನಮ್ಮಕಯ್ಯಲ್ಲಿ ಒಂದು ಪಾವಾಣೆ ಕೂಡಾ ಉಳಿಯದು ! "

"ಹಾಗಾದ್ರೆ ಕಂಪೆನಿಯವರೇ ಇದಕ್ಕೆಲ್ಲ ಕಾರಣವೆನ್ನುತ್ತಿಯಾ ನೀನು ? "

"ಮತ್ತೇನು ? ಹಿಂದೆ ನಮ್ಮ ಕಂಪ್ನಿ, ನಮ್ಮನ್ನು ರಕ್ಷಿಸುವ ಕಂಪ್ನಿ

ಎಂದು ನಮ್ಗೆ ಪ್ರೀತಿಯಿತ್ತು. ಆದ್ರೆ ಈಗ ಕಂಪ್ನಿ ನಮ್ಗೆ ಎದುರು ನಿಂತಿದೆ. ನಮ್ಮನ್ನು ಹಾಳುಮಾಡ್ತಿದೆ. ಅದ್ರಮೇಲೆ ಪೋಲೀಸರು ಇದ್ದಾರಲ್ಲ? ಎದ್ದದ್ದಕ್ಕೆ ಕೂತದ್ದಕ್ಕೆ ನಂಬ್ರಗಳು. ಇನ್ನೆಲ್ಲ ಗ್ರಹಿಸು ವಾಗ ಈ ಕೆಲ್ಸ ನಾಯಿಗೆ ಕೊಟ್ರೂ ಬೇಡವೆಂದೆನಿಸ್ತದೆ ನನ್ಗೆ."

"ನೀನು ಕಂಪೆನಿಯನ್ನು ಇಷ್ಟು ದೂರುತ್ತಿಯಲ್ಲವೆ?" ಆ ವ್ಯಕ್ತಿ ಪ್ರಶ್ನಿಸಿತು. "ಕಂಪನಿಯಲ್ಲದಿದ್ದರೆ ಈ ಮೋಟಾರುಗಳು ಇರುತ್ತಿದ್ದವೆ? ನಿನಗೆ ಕೆಲಸ ಸಿಗುತ್ತಿತ್ತೆ?"

"ಅದು ಬೇರೆ ಲೆಕ್ಕ ಸ್ವಾಮಿ,?" ನಾರಾಯಣನೆಂದ. ಕಂಪ್ನಿ ಎಂದ್ರೆ ನಾವು. ನಾವು ಎಂದ್ರೆ ಕಂಪ್ನಿ. ಕಂಪನಿಯವ್ರು ಹಣ ಕೊಟ್ರೆ ಏನಾಯ್ತು? ಹಣಕ್ಕೆ ಲಾಭ ಸಿಗೋದಿಲ್ವೆ?

ಅವ್ರು ನಮ್ಮನ್ನು ದುಡ್ಸಿ ಮಾಳಿಗೆ ಮನೆ ಮಾಡಿ ಸುಖಪಡೋ ದಿಲ್ವೆ? ನಮ್ಕೈಯ್ಯಿ ಯಾವಾಗ್ಲೂ ಗ್ರೀಸ್–ಎಣ್ಣೆಗಳು ತಾಗಿ ಕಪ್ಪಾಗಿರು ತ್ತವೆ. ನಮ್ಮ ಮೈಯಲ್ಲಿ ಯಾವಾಗ್ಲೂ ಬೆವ್ರು ಬರ್ತದೆ. ಆದ್ರೆ ಕಂಪ್ನಿ ಯವ್ರು ಏನು ಮಾಡ್ತಾರೆ? ಅವ್ರೆಷ್ಟು ದುಡೀತಾರೆ.? ನಾವು ಕೆಲ್ಸ ಮಾಡ್ತಿದ್ರೆ ಅವ್ರಿಗೆಲ್ಲ ಲಾಭ ಸಿಗ್ಬೇಕು? ಅವ್ರು ಲಾಭದಲ್ಲಿ ಅರ್ಧ ಪಾಲನ್ನಾದ್ರೂ ನಮ್ಗೆ ಕೊಡ್ಲಿ. ಇದೇ ಬಸ್ಸು ಮೈಲಿಗೆ ಇದ್ಕೆ ಅರ್ಧಾಣೆಯ ಡೀಸಿಲ್ ಎಣ್ಣೆ ಬೇಕು. ಆದ್ರೆ ಅದ್ಕೆ ಮೈಲಿಗೆ ಪ್ರತಿಯೊಬ್ಬ ಪ್ರಯಾ ಣಿಕನೂ ಏಳು ಪೈ ಕೊಡ್ತಾನೆ! ಮೂವತ್ತು ಜನ ಕುಳಿತುಕೊಳ್ಳುವ ಈ ಬಸ್ಸಿನಲ್ಲಿ ಇಪ್ಪತ್ತೊಂಬತ್ತು ಜನ್ರಿಂದ ಸಿಗುವ ಹಣ ಲಾಭವಾಯ್ತಲ್ಲ?"

"ಲೆಕ್ಕ ಸರಿ," ಎಂದು ಆ ವ್ಯಕ್ತಿ ನಕ್ಕ.

ತುಸು ಹೊತ್ತು ಮತ್ತೆ ನಾರಾಯಣ ಯೋಚನೆ ಮಾಡಿದ. ಇಲ್ಲಿ ತನ್ನ ಪರಿಚಯದವರ್ಯಾರೂ ಇಲ್ಲವೆಂಬುದು ಅವನಿಗೆ ಖಚಿತವಾಯಿತು. ಆದರೆ ಈ ವ್ಯಕ್ತಿ ಯಾರಾದರೂ ಕಂಪನಿಯ ಗೂಢಚಾರನೇ ಎಂದು ಅವನಿಗೆ ಮತ್ತೆ ಅನ್ನಿಸಿತು.

ಅವನೆಂದುದರಲ್ಲಿಯೂ ತಥ್ಯಾಂಶವಿರದಿದ್ದಿಲ್ಲ. ಹಿಂದೆ ಅವನು ಕ್ಲೀನರನಾಗಿ ಬಸ್ಸಿನ ಕೆಲಸಕ್ಕೆ ಸೇರಿದ ಬಳಿಕ ಅವನಿಗೆ ಒಂದೆರಡು ವರ್ಷಗಳ ವರೆಗೆ ಎಲ್ಲಿಗೂ ಸ್ಥಳಾಂತರವಾಗಿರಲಿಲ್ಲ. ಬಸ್ಸು ನಡೆಸುವ

ಮುಂಡಪ್ಪನೂ ಅದರಲ್ಲೇ ಇದ್ದ. ಆಗ ಅವರ ಬಸ್ಸೆಂದರೆ ಸ್ವಂತ ಮನೆಯಿದ್ದಂತೆ. ಅದರಲ್ಲಿ ತೂಗಾಡುತ್ತಿದ್ದ ಚಿತ್ರಗಳೇನು! ಅದರ ಬಣ್ಣಗಳೇನು! ಪ್ರತಿಯೊಂದು ಸಾಮಾನನ್ನೂ ಸಂಜೆ ಶೋಧಿಸಿ ಅವರು ಶುಚಿಮಾಡಿಡುತ್ತಿದ್ದರು. ಆಗ ಬಸ್ಸನ್ನು ತೊಳೆಯಲು ನಾರಾಯಣ ನಿಗೆ ಕಡಿಮೆಯೆಂದರೆ ಎರಡು ಗಂಟೆ ಸಮಯವಾದರೂ ಬೇಕಾಗು ತ್ತಿತ್ತು. ಅವನೇ ನೀರು ತಂದು ಬಾಲ್ದಿಯಲ್ಲಿ ಹ್ಯೊದು ಬಸ್ಸಿನ ಕೆಳ ಭಾಗಕ್ಕೆ ಹೋಗಿ ವಸ್ತ್ರವನ್ನದ್ದಿ ಅದನ್ನು ತೊಳೆಯುತ್ತಿದ್ದ. ಅದರಲ್ಲಿ ಒಂದು ಚೂರು ಕೆಸರಾಗಲೀ ಮಣ್ಣಾಗಲೀ ನಿಲ್ಲದಂತೆ ಜಾಗ್ರತೆ ವಹಿ ಸುತ್ತಿದ್ದ. ಮತ್ತೆ ಮೇಲೆ ಚಕ್ರಗಳನ್ನು ಕೂಡಾ–ಅವಶ್ಯವಿಲ್ಲದಿದ್ದರೂ– ಚೆನ್ನಾಗಿ ತೊಳೆದು ಶುಭ್ರವಾಗಿರಿಸುತ್ತಿದ್ದ. ಬಸ್ಸಿನ ಬಣ್ಣ ಹಾಳಾ ಗದಂತೆ ಸ್ವತಃ ಕ್ರಯ ಕೊಟ್ಟು ಪಾಲಿಷನ್ನು ಪಡೆದು ಅದಕ್ಕೆ ಪಾಲಿಷ್ ಹಾಕುತ್ತಿದ್ದ. ಹೊಳೆಯುವ ಭಾಗಗಳನ್ನು ದಿನ ನಿತ್ಯವೂ ಒರಸು ತ್ತಿದ್ದ. ಅವನ ಕೆಲಸ ಮುಂಡಪ್ಪನಿಗೆ ಕೂಡಾ ತುಂಬಾ ಮೆಚ್ಚುಗೆ ಯಾಗಿತ್ತು. ಅಲ್ಲದೆ, ಮತ್ತೆ ಮತ್ತೆ ಮುಂಡಪ್ಪನ ಸಹಾಯದಿಂದ ಎಂಜಿನನ್ನು ಬಿಚ್ಚಿ ಅದನ್ನು ಸರಿಮಾಡಿ, ಶುಚಿಯಾಗಿಡುತ್ತಿದ್ದ. ಆ ದಿನಗಳಲ್ಲಿ ಒಂದು ದಿನವಾದರೂ ನಾರಾಯಣ ಕೆಲಸಕ್ಕೆ ಬಾರದಿದ್ದು ದೆಂದಿಲ್ಲ. ಅವನ ಸ್ನೇಹಿತರು ಅವನಿಗೆ ಮೋಟರಿನ ಹುಚ್ಚು ಹಿಡಿದಿ ದೆಯೆಂದು ವಿನೋದವಾಡುತ್ತಿದ್ದರು.

ಎಲ್ಲಕ್ಕಿಂತಲೂ ಹೆಚ್ಚಾಗಿ ಮುಂಡಪ್ಪನೊಡನೆ ಅವನಿಗೆ ಬಹಳ ಅನ್ಯೋನ್ಯತೆ ಬೆಳೆದಿತ್ತು. ಅವನನ್ನು ಯಾವಾಗಲೂ ಭಕ್ತಿಯಿಂದ "ಅಣ್ಣಾ" ಎಂದೇ ಸಂಬೋಧಿಸುತ್ತಿದ್ದ. ಮುಂಡಪ್ಪ ಮಾತ್ರ ಅವನಿಗೆ ಪ್ರಾರಂಭದಲ್ಲಿ ಹೆಚ್ಚು ಸಲುಗೆ ಕೊಡುತ್ತಿದ್ದಿಲ್ಲ. ಅವನು ಅವಶ್ಯ ವುಳ್ಳ ಸಂದರ್ಭಗಳಲ್ಲಿ ಮಾತ್ರ ನಾರಾಯಣನೊಡನೆ ಮಾತಾಡುತ್ತಿದ್ದ. ಆದರೆ ಅವರೊಳಗೆ ಎಂದೂ ಜಗಳವಾಗಲೀ ಮನಸ್ತಾಪವಾಗಲೀ ಆಗುತ್ತಿದ್ದಿಲ್ಲ. ಮುಂಡಪ್ಪ ಅವನಿಗೆ ಒಬ್ಬ ನಾಯಕನಂತಿದ್ದ. ಅವನ ಪೂಜೆ ಮಾಡಿ ಅವನನ್ನು ಒಲಿಸುವುದೊಂದೇ– ತನ್ನ ಜೀವಿತೋದ್ದೇಶ ವೆಂದು ನಾರಾಯಣ ಬಹುಕಾಲ ನಂಬಿದ್ದ. ಮುಂಡಪ್ಪ ಅವನೊಡನೆ

ಹೆಚ್ಚು ಮಾತುಕತೆಯನ್ನಾಡದಿದ್ದರೂ ಅವನಿಗೆ ಬೀಡಿ ಕೊಡುವುದು, ಕಾಫಿ ಕುಡಿಸುವುದು ಮುಂತಾದುವುಗಳಲ್ಲಿ ತನ್ನ ಅಭಿಮಾನವನ್ನು ಆಗಾಗ ತೋರಿಸುತ್ತಿದ್ದ. ಒಮ್ಮೆ ನಾರಾಯಣ ಕಾಯಿಲೆಯಲ್ಲಿದ್ದಾಗ ಮುಂಡಪ್ಪ ಅವನನ್ನು ತನ್ನ ಮನೆಗೆ ಕರೆದುಕೊಂಡು ಹೋಗಿ ಅಲ್ಲಿ ವೈದ್ಯರಿಂದ ಆರೈಕೆ ಮಾಡಿಸಿದ್ದ. ನಾರಾಯಣ ಕ್ಲೀನರನಾಗಿದ್ದಾಗಲೇ ಒಮ್ಮೆ ಒಂದು ಅಪಘಾತವಾಗಿತ್ತು. ಅದರಲ್ಲಿ ಅನೇಕರಿಗೆ ಜಖಂ ಆಗಿತ್ತು. ಆರೇಳು ಜನ ಸತ್ತಿದ್ದರು. ಬಸ್ಸು ನುಚ್ಚು ನೂರಾಗಿತ್ತು. ಪೋಲೀಸರು ಮುಂಡಪ್ಪನೇ ತಪ್ಪಿತಸ್ಥನೆಂದು ಸಾಧಿಸಿದ್ದರು. ಆದರೆ ಆಗ ನಾರಾಯಣನ ಸಾಕ್ಷ್ಯ ಮುಂಡಪ್ಪನನ್ನು ಶಿಕ್ಷೆಯಿಂದ ಪಾರುಮಾಡಿತ್ತು. ಅವನನ್ನು ಅವರು ಸುಳ್ಳು ಹೇಳಬೇಕೆಂದು ಎಷ್ಟು ಹೆದರಿಸಿದ್ದರೂ ಅವನು ಅವರಿಗೆ ಬಗ್ಗಿರಲಿಲ್ಲ. ಮುಂಡಪ್ಪನಿಗೆ ಅಂದಿನಿಂದ ನಾರಾಯಣನ ಮೇಲಿದ್ದ ಪ್ರೀತಿ ಇಮ್ಮಡಿಯಾಯಿತು.

ಅವನು ನಾರಾಯಣನಿಗೆ ಮತ್ತೆ ಬಸ್ಸು ನಡೆಸಲು ಕಲಿಸ ತೊಡಗಿದ. ಅದೂ ಆ ದೊಡ್ಡ ಮೋಟಾರಿನಲ್ಲೇ ಕಲಿಯಬೇಕಾಗಿತ್ತು. ಕೆಲವು ಸಲ ಸ್ವಲ್ಪ ಪೆಟ್ರೋಲನ್ನು ಮಂಗಳೂರಿಂದ ತರುತ್ತಿದ್ದರು. ನಾರಾಯಣನಿಗೆ ಸ್ಟಿಯರಿಂಗ್ ಚಕ್ರವನ್ನು ತಿರುಗಿಸಲಿಕ್ಕೆ ತುಂಬಾ ತರಬೇತಿ ಬೇಕಾಯಿತು. ಆ ಎತ್ತರದ ಬಸ್ಸಿನಲ್ಲಿ ಅವನಿಗೆ ರಸ್ತೆಯ ಅಂದಾಜು ಸರಿಯಾಗಿ ಆಗುತ್ತಿದ್ದಿಲ್ಲ. ಆದರೂ ಮುಂಡಪ್ಪ ಅವನನ್ನು ತನ್ನ ತೊಡೆಯಮೇಲೆ ಕುಳ್ಳಿರಿಸಿ ಸ್ಟಿಯರಿಂಗ್ ಚಕ್ರವನ್ನು ತಿರುಗಿಸುವುದನ್ನು ಹೇಳಿಕೊಡುತ್ತಿದ್ದ. ಮೊದಲು ರೇಡಿಯೇಟರಿನ ತುದಿಯಲ್ಲಿದ್ದ ಮುಚ್ಚಳವನ್ನೇ ನೋಡಬೇಕೆನ್ನುತ್ತಿದ್ದ. ಅದು ರಸ್ತೆಯ ಮಧ್ಯಭಾಗದಲ್ಲಿರುವಂತೆ ಸ್ಟಿಯರಿಂಗ್ ಚಕ್ರವನ್ನು ತಿರುಗಿಸಬೇಕೆನ್ನುತ್ತಿದ್ದ. ಈ ತರಬೇತಿಗೆ ಸುಮಾರು ಒಂದು ತಿಂಗಳು ಹಿಡಿಯಿತು. ಮತ್ತೆ ಗೀಯರ್ ಬದಲಿಸುವುದನ್ನುಹೇಳಿಕೊಟ್ಟ. ನಾರಾಯಣನಿಗೆ ಬೇರೆ ಬೇರೆ ಗೀಯರ್‌ಗಳ ಬೇರೆ ಬೇರೆ ಸ್ಥಾನಗಳನ್ನು ಅಭ್ಯಾಸಿಸಲು ಕೂಡ ಕಷ್ಟವಾಗುತ್ತಿತ್ತು. ದಿನಾಲೂ ಸಂಜೆ ಮೋಟರನ್ನು ತೊಳೆದಾದ ನಂತರ ಡ್ರೈವರನ ಸೀಟಿನಲ್ಲಿ ಕುಳಿತುಕೊಂಡು ಗೀಯರಿನ ಕೈಯನ್ನು ಹಿಡಿದು "ಫಸ್ಟ್, ಸೆಕೆಂಡ್,

ಥರ್ಡ್, ಟಾಪ್, ರಿವರ್ಸ್" ಎನ್ನುತ್ತ ಅದನ್ನು ಹಿಂದೆ ಮುಂದೆ ದೂಡು ತ್ತಿದ್ದ. ಗೀಯರ್‌ಗಳ ಸ್ಥಾನವನ್ನು ಕಲಿತರೂ ಮೆಲ್ಲನೆ ವೇಗವನ್ನು ಹೆಚ್ಚಿಸುತ್ತ ಕ್ಲಚ್ಚನ್ನೊತ್ತಿ ಅದನ್ನು ಸರಿಯಾಗಿ ಹಾಕುವ ವಿಧಾನವನ್ನು ಕಲಿಯುವುದಂತೂ ಅವನಿಗೆ ಬಹಳ ಕಷ್ಟವಾಗಿ ತೋರಿತ್ತು. ಕ್ಲಚ್ಚನ್ನು ಬೇಗನೆ ಬಿಟ್ಟರೆ ಒಮ್ಮೆಲೇ ಗಾಡಿ ಮುಂದಕ್ಕೆ ಹಾರುವುದು. ಹೆಚ್ಚು ಮೆಲ್ಲನೆ ಅದನ್ನು ಬಿಟ್ಟರೆ ಎಂಜಿನ್ನು ನಿಂತುಹೋಗುವುದು. ಹೀಗೆ ಕಾಲುಗಳ ಮತ್ತು ಕೈಗಳ ಸಂಯೋಜನೆಯನ್ನು ಸರಿಯಾಗಿ ಮಾಡಲು ಅವನಿಗೆ ಹೆಚ್ಚು ಸಮಯ ಬೇಕಾಯಿತು. ಆಮೇಲೆ ಮುಂಡಪ್ಪನ ಬದಿಯಲ್ಲಿ ಕುಳಿತುಕೊಂಡು ಹಲವು ದಿನಗಳವರೆಗೆ ಅದನ್ನು ತರಬೇತಿ ಮಾಡಿದ.

ಮುಂಡಪ್ಪ ಮತ್ತೆ ಅವನಿಗೆ ಮಂಗಳೂರಲ್ಲಿ ಕಾರು ನಡೆಸುವ ಅಧಿಕಾರ ಪತ್ರವನ್ನು ಪಡೆಯಲಿಕ್ಕಾಗಿ, ಒಂದು ಕಾರಿನಲ್ಲಿ ಸ್ವಲ್ಪ ದಿನ ತರಬೇತಿ ಮಾಡಿಸಿದ. ಆಮೇಲೆ ಅವನಿಗೆ ಕಾರು ನಡೆಸುವ ಅಧಿಕಾರ ಪತ್ರವೂ ದೊರಕಿತು, ಅದಕ್ಕೆ ಖರ್ಚಾದ ಹಣದ ಹೆಚ್ಚಿನ ಭಾಗವನ್ನು ಮುಂಡಪ್ಪನೇ ತೆತ್ತಿದ್ದ.

ಬಸ್ಸು ಬಿಡುವ ಲೈಸನ್ಸ್ ಸಿಗಬೇಕಾದರೆ ನಾರಾಯಣ ಮತ್ತೂ ಮೂರು ವರ್ಷಗಳನ್ನು ಕಳೆಯಬೇಕಾಗಿತ್ತು. ಆ ಅವಧಿಯನ್ನು ಅವನು ಕ್ಲೀನರನಾಗಿಯೇ ಕಳೆದ. ಮುಂಡಪ್ಪ ಮತ್ತೆ ಮತ್ತೆ ಪೋಲೀಸ್ ಠಾಣೆ ಸಮೀಪವಿಲ್ಲದ್ದಲ್ಲಿ ನಾರಾಯಣನಿಗೆ ಬಸ್ಸು ನಡೆಸಲು ಹೇಳುತ್ತಿದ್ದ. ಆಗಲೂ ಆಗಾಗ್ಗೆ ಅವನಿಗೆ ಜಾಗ್ರತೆ ಹೇಳುತ್ತಿದ್ದ. ರಸ್ತೆಯಲ್ಲಿ ನಿಂತಿದ್ದ ವಾಹನವನ್ನು ಹೇಗೆ ಹಾದು ಹೋಗಬೇಕು, ಚಲಿಸುವ ವಾಹನವನ್ನು ಹೇಗೆ ಹಾದು ಹೋಗಬೇಕು, ಹಿಂದಿನಿಂದ ಬರುವ ವಾಹನಗಳಿಗೆ ಹೇಗೆ ದಾರಿ ಬಿಟ್ಟು ಕೊಡಬೇಕು, ಅದನ್ನು ಇಳಿಜಾರಿನ ರಸ್ತೆಗಳಲ್ಲಿ ಹೇಗೆ ನಡೆಸಬೇಕು, ತಿರುಗು ರಸ್ತೆಗಳಲ್ಲಿ ಹೇಗೆ ಅದನ್ನು ಓಡಿಸಬೇಕು.–ಇತ್ಯಾದಿಗಳನ್ನೆಲ್ಲ ಅವನು ನಾರಾಯಣನಿಗೆ ಕಲಿಸಿದ. ಇಷ್ಟೆಲ್ಲ ಮಾಡಿದುದಕ್ಕೆ ನಾರಾಯಣ ಮುಂಡಪ್ಪನಿಗೆ ಒಮ್ಮೆಯೂ ಕಾಫಿ ಕುಡಿಸಿದ್ದಿಲ್ಲ. ಅಂದರೆ ಕುಡಿಸಲಿಕ್ಕೆ ಮನಸ್ಸಿರಲಿಲ್ಲವೆಂದಲ್ಲ; ಅವನನ್ನು ಕಾಫಿ ಕುಡಿಯಲು

ಕರೆಯಲಿಕ್ಕೆ ಧೈರ್ಯವಿದ್ದಿಲ್ಲ. ಮುಂಡಪ್ಪ ಮಾತ್ರ ಅವನಿಗೆ ಕಾಫಿ ಯನ್ನು ಮಾತ್ರವಲ್ಲ ಕೆಲವು ವೇಳೆ ಸೇಂದಿ ಶರಾಬುಗಳನ್ನೂ ಕುಡಿಸಿದ್ದ. ನಾರಾಯಣ ಉಪಾಯವಿಲ್ಲದೆ ಅವನ್ನು ಕುಡಿದೂ ಇದ್ದ. ಹೀಗೆ ಕೊನೆಗೆ ಅವನಿಗೆ ಬಸ್ಸು ಬಿಡುವ ಲೈಸನ್ಸ್ ಕೂಡ ದೊರಕಿತು.

ಆದರೆ ಈಗಿನ ಪರಿಸ್ಥಿಯಲ್ಲಿ ಹಾಗೆ ಕಲಿಯುವುದು ಸಾಧ್ಯವಿರಲಿಲ್ಲ. ಕ್ಲೀನರ-ಡ್ರೈವರರೊಳಗೆ ಮೈತ್ರಿ ಬೆಳೆಯಲೀ ಇಲ್ಲಿ! ಅವಕಾಶವಿದ್ದಿಲ್ಲ. ಒಂದೇ ರಸ್ತೆ-ಒಂದೇ ವಾಹನವೆಂಬ ಪದ್ಧತಿಯಿಲ್ಲದ್ದರಿಂದ. ವಾಹನ ಗಳೂ ಅಷ್ಟೊಂದು ನಾಜೂಕಾಗಿ ಉಳಿಯುತ್ತಿದ್ದಿಲ್ಲ. ಹೆಚ್ಚಿನವು ಆಗಾಗ ಹಾಳಾಗುತ್ತಲೇ ಇದ್ದುವು. ಆದರೂ ನಾರಾಯಣ ತನ್ನ ಒಂದು ಬಸ್ಸನ್ನು ಆದಷ್ಟು ತನ್ನದಾಗಿಯೇ ಇಟ್ಟುಕೊಳ್ಳಬೇಕೆಂದು ಯತ್ನಿಸು ತ್ತಿದ್ದ. ಅವನ ಬಸ್ಸಿನ ಕ್ಲೀನರ್ ಮೋನಪ್ಪ ಕೆಲವು ತಿಂಗಳುಗಳಿಂದ ಅವನ ಜೊತೆಯಲ್ಲೇ ಉಳಿದು ಮೋಟರ್ ನಡೆಸುವುದನ್ನು ಸ್ವಲ್ಪ ಸ್ವಲ್ಪ ಕಲಿತಿದ್ದ.

ಕಾರ್ಕಳ ಬಂತು. ಅವನು ಬಸ್ಸನ್ನು ನಿಲ್ಲಿಸಿ ಕೆಳಗಿಳಿದ. ಪತ್ರಿಕೆ ಯಲ್ಲಿ ಏನಾದರೂ ಸುದ್ದಿ ಬಂದಿದೆಯೆ ಎಂದು ನೋಡೋಣವೆಂದು ಒಂದು ಪತ್ರಿಕೆಯನ್ನು ತೆಗೆದು ನೋಡಿದ.

ಅದರಲ್ಲಿ ಒಂದೆಡೆ ಹೀಗೆಂದು ಬರೆದಿತ್ತು:

## ಮೋಟರ್ ಅಪಘಾತದ ಅಪರಾಧಿಯು ಪತ್ತೆ?

### ಇಬ್ಬರು ಡ್ರೈವರನ್ನು ಕೈದು ಮಾಡಲಾಗಿದೆ

ಮಂಗಳೂರು ಜೂ ೨೧: ಮೊನ್ನೆ ಮೋಟರ್ ದುರಂತಕ್ಕೀಡಾಗಿ ಮೃತ ಪಟ್ಟನೆಂದು ನಂಬಲಾದ ದೂಮನೆಂಬವನ ಶವ ವನ್ನು ಅವನ ಸಂಬಂಧಿಕರು ಆಸ್ಪತ್ರೆಯಿಂದ ಪಡೆದುಕೊಂಡು ದಹನ ಮಾಡಿದ್ದಾರೆಂದು ತಿಳಿದುಬರುತ್ತದೆ.

ಶವ ಪರೀಕ್ಷೆಯನ್ನು ಮಾಡಿದ ಡಾಕ್ಟರರು ಈ ಅಪ

ಘಾತವು ಲಘುವಾದ ಮೋಟರ್ ವಾಹನದಿಂದಾಗಿ ಸಂಭವಿಸಿರ ಬೇಕೆಂದು ಅಭಿಪ್ರಾಯ ಪಟ್ಟಿರುವರೆಂದು ಹೇಳಲಾಗಿದೆ.

ಮೃತನು ಇಲ್ಲೇ ಒಂದು ಸಣ್ಣ ಅಂಗಡಿಯನ್ನಿಟ್ಟು ಕೊಂಡಿದ್ದನೆಂದೂ ಅವನಿಗೆ ಮೂವರು ಮಕ್ಕಳಿರುವರೆಂದೂ ತಿಳಿದುಬಂದಿದೆ.

ಈ ಪ್ರಕರಣಕ್ಕೆ ಸಂಬಂಧಿಸಿದವರೆಂದು ಹೇಳಲಾದ ಇಬ್ಬರು ಕಾರು ಡ್ರೈವರುಗಳನ್ನು ಪೋಲೀಸರು ಕೈದುಮಾಡಿ ದ್ದಾರೆ. ಇವರಿಬ್ಬರೂ ತಾವು ಈ ತಕ್ಸೀರನ್ನು ನಡೆಸಿಲ್ಲವೆಂದು ಪೋಲೀಸರೊಡನೆ ಹೇಳಿಕೆಯನ್ನಿತ್ತಿರುವರೆಂದು ಅಧಿಕಾರಿ ವಲಯಗಳಲ್ಲಿ ತಿಳಿದು ಬರುತ್ತಿದೆ. ಪೋಲೀಸು ತನಿಖೆ ಮುಂದು ವರಿಯುತ್ತಿದೆ.

ನಾರಾಯಣನಿಗೆ ಇದನ್ನೋದಿದಾಗ ಮುಖ ಬಿಳುಪೇರಿತು. ಹಿಂದಿನ ದಿನದ ಸುದ್ದಿಯಲ್ಲಿ ಅದು ಭಾರವಾದ ವಾಹನವಾಗಿರಬಹುದೆಂಬ ಸುದ್ದಿಯಿತ್ತು. ಈಗ ಅದು ಲಘುವಾದ ವಾಹನವಾಗಿರಬೇಕೆಂದು ಡಾಕ್ಟರರು ಅಭಿಪ್ರಾಯಪಟ್ಟರೆಂದಿತ್ತು. ಅವನು ಜನರ ಗುಂಪಿನಿಂದ ದೂರದಲ್ಲಿ ನಿಂತುಕೊಂಡು ಎಲ್ಲರನ್ನೂ ನೋಡತೊಡಗಿದ. ಆದರೆ ಅವನನ್ನು ಯಾರೂ ಗಮನಿಸುತ್ತಿದ್ದಿಲ್ಲ. ಬಸ್ಸನ್ನು ಹಿಂದಕ್ಕೆ ಕೊಂಡು ಹೋಗಲು ಇನ್ನೂ ಸಮಯವಿತ್ತು.

ಒಮ್ಮೆ ಅವನಿಗೆ ತಾನಿನ್ನು ಸಿಕ್ಕಿಬೀಳಲಿಕ್ಕಿಲ್ಲವೆಂದು ತೋರಿತ್ತು. ತನ್ನದು ಭಾರವಾದ ವಾಹನ. ಡಾಕ್ಟರರು ಹೇಳುವುದು ಹಗುರವಾದ ವಾಹನವೆಂದು. ಹಾಗಾದರೆ ತನಗೇನೂ ಆಗಲಿಕ್ಕಿಲ್ಲ. ಯಾರೂ ತನ್ನನ್ನು ಪತ್ತೆಹಚ್ಚಲಿಕ್ಕಿಲ್ಲ.

ಆದರೆ ಇದು ಪೋಲೀಸರ ತಂತ್ರವೂ ಆಗಿರಬಹುದು. ನಿಜ ಸಂಗತಿಯನ್ನು ಹೇಳಿದರೆ ಅಪರಾಧಿಯು ತಪ್ಪಿಸಿಕೊಂಡಾನೆಂದು ಅವರು ಇಂಥ ಸುದ್ದಿಯನ್ನು ಪ್ರಕಟಿಸಿರಬಹುದು. ಇದನ್ನೋದಿದ ಅಪ ರಾಧಿಯು ತಾನು ಪಾರಾದೆನೆಂದು ಭಾವಿಸಿ ಯಾರ ಗಣ್ಯವೂ ಇಲ್ಲದೆ

ಮರೆಯಬಹುದು. ಆಗ ಅವನನ್ನು ಹಿಡಿಯಲು ಸುಲಭವೆಂದು ಅವರು ಉಪಾಯವನ್ನು ಮಾಡಿರಬಹುದು.

ಅದು ನಿಜವಾದರೆ, ಅವರು ಕಾರುಗಳ ಡ್ರೈವರರನ್ನು ಏಕೆ ಹಿಡಿಯಬೇಕಿತ್ತು ?

ಇಷ್ಟೆಲ್ಲ ಯೋಚಿಸುವಾಗ ಬಸ್ಸು ಬಿಡುವ ಸಮಯವಾಯಿತು. ಅವನನ್ನು ಬಸ್ಸಿನ ಏಜೆಂಟರು ಕರೆಯುತ್ತಿದ್ದರು.

"ಅವರ ಮಾವ ತೀರಿಹೋದರು. ಅದರ ವ್ಯಥೆಯಲ್ಲಿದ್ದಾರೆ ಅವರು" ಎಂದು ಕಂಡಕ್ಟರ್ ಜುವಾನ ಅವರಿಗೆ ಹೇಳಿದ.

"ಹಾಗಾದ್ರೆ ಅವನು ಮನೆಯಲ್ಲೇ ಕುಳಿತುಕೊಳ್ಳಬೇಕಿತ್ತು. ಕೆಲ ಸಕ್ಕೆ ಬಂದಮೇಲೆ ಕಳ್ಳರಂತೆ ಮಾಡುವುದೇಕೆ ?" ಎಂದು ಏಜೆಂಟರು ಕೇಳಿದರು.

ನಾರಾಯಣ ಅವರನ್ನು ಅರ್ಥಪೂರ್ಣವಾಗಿ ನೋಡುತ್ತ ಬಸ್ಸಿನಲ್ಲಿ ಕುಳಿತುಕೊಂಡು, ಅದನ್ನು ನಡೆಸಿದ.

ಆಗ ಏಜೆಂಟರು "ನಿಲ್ಲಪ್ಪಾ ಸ್ಟೇಟ್‌ಮೆಂಟ್ ಕೊಡ್ಲಿಲ್ಲ" ಎಂದು ಬೊಬ್ಬಿಟ್ಟರು.

"ಸಮಯವಾಯ್ತು ಸ್ವಾಮೀ. ನಾವು ಕಳ್ರಂತೆ ಮಾಡಿದ್ರೂ ನಮ್ಗೂ ಸಮಯವೆಂಬುದೊಂದಿದೆಯಲ್ಲ!" ಎಂದು ನಾರಾಯಣ ವ್ಯಂಗ್ಯವಾಗಿ ಹೇಳಿದ.

ಮತ್ತೆ ಬಸ್ಸು ಹೊರಟಿತು. ನಾರಾಯಣನಿಗೆ ಯಾರೊಡನೆಯೂ ಮಾತಾಡಲು ಮನಸ್ಸಿರಲಿಲ್ಲ. ಅವನ ಕಣ್ಣಿನ ಮುಂದೆ ಪತ್ರಿಕೆಯಲ್ಲಿ ಅಚ್ಚಾಗಿದ್ದ ಸುದ್ದಿಯೇ ಬಂದು ನಿಲ್ಲುತ್ತಿತ್ತು. ಯಾರ ಮುಖವನ್ನು ನೋಡಿದರೂ ಅವನಿಗೆ ಸಂಶಯ ಮೂಡುತ್ತಿತ್ತು. ಪೋಲೀಸರನ್ನು ಕಂಡರಂತೂ ಅವನ ಎದೆ ನಡುಗುತ್ತಿತ್ತು. ಬಸ್ಸಿನ ಸ್ಟೀಯರಿಂಗನು ಹಿಡಿಯುವ ಸ್ವಾತಂತ್ರ್ಯ ತನಗೆ ಇನ್ನೆಷ್ಟು ಸಮಯ ಉಳಿಯುವುದೋ ಎಂದು ಅವನಿಗೆ ಆಗ ತೋರುತ್ತಿತ್ತು.

ಮಧ್ಯಾಹ್ನ ಬಸ್ಸು ಮಂಗಳೂರಿಗೆ ತಲುಪಿತು. ಮತ್ತೆ ಅರ್ಧ ಗಂಟೆಯಲ್ಲೇ ಅದು ಪುನಃ ಹೊರಡಬೇಕಿತ್ತು.

ನಾರಾಯಣನ ಬಸ್ಸು ಪುನಃ ಹೊರಟಿತು. ಅದೇ ಗುರುಪುರ, ಮಿಜಾರು, ಮೂಡಬಿದ್ರೆ, ಕಾರ್ಕಳ....

ಬಸ್ಸಿನ ಚಕ್ರಗಳು ಒಂದೇ ಸಮನೆ ತಿರುಗುತ್ತಿದ್ದುವು. ಎಂಜಿನು ಬಿಸಿಯಾಗಿ ಬುಸುಗುಟ್ಟುತ್ತಿತ್ತು. ಅದರ ಜೊತೆಗೆ ಬಿಸಿಲಿನ ಝಳ ಉಷ್ಣವನ್ನು ಇನ್ನೂ ಹೆಚ್ಚಿಸುತ್ತಿತ್ತು. ನಾರಾಯಣ ಎಕ್ಸಲರೇಟರನ್ನು ಕೆಳಗೆ ಜಗ್ಗಿದ. ಬಸ್ಸು ರಸ್ತೆಯ ಎಲ್ಲೆಡೆಗಳಿಂದಲೂ ಹೋಗುತ್ತಿತ್ತು. ಕೆಲವುಬಾರಿ ಅದರ ಚಕ್ರಗಳು ರಸ್ತೆಯಲ್ಲಿದ್ದ ಹೊಂಡಗಳಿಗೆ ಬೀಳುವುವು. ಆಗ ಇಡೀ ಬಸ್ಸನ್ನೇ ಕುಲುಕಿಸಿದಂತಾಗುವುದು. ಜನರ ತಲೆಗಳೆಲ್ಲ ಬಸ್ಸಿನ ಸರಳುಗಳಿಗೆ ಮರದ ಬಾಗಿಲುಗಳಿಗೆ ಕೆಲವು ಸಲ ಮಾಡಿಗೆ ಕೂಡಾ ತಾಗುತ್ತಿದ್ದುವು. ಹಿಂದಿನಿಂದ ರ್‍ಯೊಂಯ್ ಎಂಬ ವಿಮಾನ ದಂತಹ ಸದ್ದುಮಾತ್ರ ಕೇಳುತ್ತಿತ್ತು. ನಾರಾಯಣ ಸ್ಟೀಯರಿಂಗನ್ನು ಗಡಿಬಿಡಿಯಲ್ಲಿ ಅತ್ತಿತ್ತ ತಿರುಗಿಸುತ್ತಿದ್ದ. ವೇಗ ತೋರಿಸುವ ಯಂತ್ರದ ಮುಳ್ಳು ಮೇಲಕ್ಕೇರುತ್ತಿತ್ತು. ಮೂವತ್ತು, ಮೂವತ್ತೈದು, ನಲ್ವತ್ತು, ನಲ್ವತ್ತೈದು.

ನಾರಾಯಣನಿಗೆ ಆಗ ತಾನು ಆ ಗಾಡಿಯನ್ನು ಎಷ್ಟು ಅಪಾಯ ಕರವಾದ ವೇಗದಲ್ಲಿ ಕೊಂಡುಹೋಗುತ್ತಿದ್ದೇನೆಂದು ತಿಳಿಯುತ್ತಿದ್ದಿಲ್ಲ. ಅವನು ತಲೆಯನ್ನು ಅತ್ತಿತ್ತ ತಿರುಗಿಸುತ್ತಿದ್ದಿಲ್ಲ. ಕಣ್ಣುಗಳು ಎದು ರಿನ ರಸ್ತೆಯ ಮೇಲೆಯೇ ಇದ್ದುವು. ಬಸ್ಸಿನ ಒಳಗೆ ಕುಳಿತುಕೊಂಡ ವರಿಗೆ ಭಯವಾಗುತ್ತಿತ್ತು. ಒಂದು ಮಗು ಚಿಟ್ಟನೆ ಚೀರತೊಡಗಿತು. ಆದರೆ ನಾರಾಯಣನ ಗಮನಕ್ಕೆ ಯಾವುದೂ ಬರಲಿಲ್ಲ. ಮುಂದಿನಿಂದ ಹೋಗುತ್ತಿದ್ದ ಆರೇಳು ಲಾರಿಗಳನ್ನೂ ಒಂದೆರಡು ಬಸ್ಸುಗಳನ್ನೂ ಹಾದು ಅವನು ಮುಂದರಿದ. ಅಷ್ಟರಲ್ಲಿ ಒಂದು ಕಾರು ಕಾಣಸಿಕ್ಕಿತು. ಅದು ರಸ್ತೆಯ ಮಧ್ಯದಿಂದ ಹೋಗುತ್ತಿತ್ತು. ಆರೇಳುಬಾರಿ ಹಾರ್ನು ಬಾರಿ ಸಿದನವ. ಆದರೂ ಅದು ಬಸ್ಸು ಮುಂದೆ ಹೋಗಲು ದಾರಿ ಬಿಡ

ಲಿಲ್ಲ. ಅವನು ಬಸ್ಸನ್ನು ಅದರ ಹತ್ತಿರ ಹತ್ತಿರಕ್ಕೆ ಕೊಂಡುಹೋದ. ಬಸ್ಸಿನ ಮುಂಭಾಗದ ಬಂಪರು ಕಾರಿನ ಹಿಂಭಾಗಕ್ಕೆ ತಾಗುವುದೋ ಎಂದು ತೋರಿತು. ಕಾರಿನಲ್ಲಿದ್ದವರು ಒಳಗಿನಿಂದ ಬೊಬ್ಬಿಡುತ್ತಿದ್ದರು. ಇನ್ನೂ ಸ್ವಲ್ಪ ಮುಂದರಿದ ಬಳಿಕ ಕಾರು ತುಸುವೇಗವಾಗಿ ಹೋಗತೊಡಗಿತು. ನಾರಾಯಣ ಎಕ್ಸಲರೇಟರನ್ನು ಕಾಲಿನಲ್ಲಿ ಕೆಳಗೆ ಜಗ್ಗಿದ. ಬಸ್ಸು ಮುಂದಕ್ಕೆ ನೆಗೆಯಿತು. ಒಂದೆಡೆ ತುಸು ಜಾಗವಿರುವಲ್ಲಿಂದ ಅವನು ಕಾರನ್ನು ಹಾದುಹೋಗಿಯೇ ಬಿಟ್ಟ. ಅವನ ವೇಗಕ್ಕೆ ಹೆದರಿ ಕಾರಿನವ ಅದನ್ನು ಬದಿಗೆ ಕೊಂಡು ಹೋಗಿ ಅದರ ವೇಗವನ್ನು ಕಡಿಮೆಮಾಡಿದ. ನಾರಾಯಣ ಅದಕ್ಕಿಂತ ಮುಂದೆ ಹೋದರೂ ಅವನು ವೇಗವನ್ನು ಕಡಿಮೆಮಾಡಲಿಲ್ಲ. ಆ ವೇಗಕ್ಕೆ ಇಡೀ ಬಸ್ಸು ನುಚ್ಚು ನೂರಾಗಿ ಹೋದೀತೆಂಬ ಭಯವೂ ಅವನಿಗೆ ಇರಲಿಲ್ಲ. ಪ್ರಯಾಣಿಕರ ಜೀವ ಹಾರಿಹೋದಂತಾಗುತ್ತಿತ್ತು. ಜುವಾನ ಬಸ್ಸನ್ನು ನಿಲ್ಲಿಸಲು ಅನೇಕಸಲ ಗಂಟೆ ಹೊಡೆಯಬೇಕಾಯಿತು. ಹಾಗೆ ಒಮ್ಮೆ ನಿಂತರೂ ಮರುಗಳಿಗೆಯಲ್ಲೇ ಅದು ವೇಗದಲ್ಲಿ ಮುಂದರಿಯುವುದು. ನಾರಾಯಣ ತನ್ನ ಕಣ್ಣಿನ ರೆಪ್ಪೆಯನ್ನು ಕೂಡಾ ಮುಚ್ಚುತ್ತಿರಲಿಲ್ಲ. ಮೈಯ್ಯನ್ನು ಒಂದಿಷ್ಟು ಅಲುಗಿಸುತ್ತಿದ್ದಿಲ್ಲ. ತಿರುಗು ರಸ್ತೆಯಲ್ಲಿ ಕೂಡಾ ಅವನು ವೇಗವನ್ನು ಕಡಿಮೆಮಾಡುತ್ತಿದ್ದಿಲ್ಲ. ಆಗ ಬಸ್ಸು ತಿರುಗುವ ರಭಸಕ್ಕೆ ಒಂದು ಬದಿಯಲ್ಲಿ ಕುಳಿತ ಜನರು ಇನ್ನೊಂದು ಬದಿಯಲ್ಲಿ ಕುಳಿತವರ ಮೇಲೆ ಜಿಗಿದು ಬೀಳುತ್ತಿದ್ದರು. ಬಸ್ಸಿನೊಳಗಿದ್ದ ಬಿಡಿ ಸಾಮಾನುಗಳೆಲ್ಲ ಗಡಗಡನೆ ಅಲುಗಾಡುತ್ತಿದ್ದುವು. ಎಲ್ಲ ಬಿಟ್ಟು ಅದರ ಮಾಡು ಕೂಡ ಅತ್ತಿತ್ತ ಅಲ್ಲಾಡುತ್ತಿತ್ತು. ನಾರಾಯಣನ ಕೈಗಳು ಸ್ಟೀಯರಿಂಗ್ ಚಕ್ರವನ್ನು ಬಿಗಿ ಹಿಡಿದಿದ್ದುವು. ಅವನ ಮುಂಗೈ ಆ ಚಕ್ರದ ಮಧ್ಯದಲ್ಲಿದ್ದ ವಿದ್ಯುಚ್ಛಕ್ತಿಯ ಹಾರ್ನಿನ ಗುಂಡಿಯ ಮೇಲಿರುತ್ತಿತ್ತು.

ಹೀಗೆ ಹೋಗುತ್ತಿದ್ದಂತೆಯೇ ಬಸ್ಸಿನಲ್ಲಿ ದೊಡ್ಡದೊಂದು ಕಿವಿ ಕೇಳುವಂಥ ಸದ್ದಾಯಿತು. ಎಲ್ಲರೂ ಬೆಚ್ಚಿಬಿದ್ದರು. ನಾರಾಯಣ ಆದಷ್ಟು ಕ್ಷಿಪ್ರದಲ್ಲಿ ಬ್ರೇಕನ್ನು ಒತ್ತಿದ. ಆದರೆ ಅಷ್ಟರೊಳಗೆ ಬಸ್ಸಿನ

ಒಂದು ಬದಿ ಒಂದು ಚರಂಡಿಗೆ ಇಳಿದಿತ್ತು. ಬಸ್ಸು ಆ ಕಡೆಗೆ ವಾಲಿತ್ತು. ಒಳಗೆ ಕುಳಿತ್ತಿದ್ದವರಲ್ಲಿ ಕೆಲವರ ಹಣೆ, ಕೆಲವರ ತಲೆಗೂ ಪೆಟ್ಟಾಗಿತ್ತು. ಒಂದು ಮಗು ತಾಯಿಯ ಮಡಿಲನ್ನು ತಪ್ಪಿ ಕೆಳಗೆ ಬಿದ್ದು ರೋದಿಸುತ್ತಿತ್ತು. ಕಂಡಕ್ಟರ ಜುವಾನ ಅಷ್ಟರಲ್ಲೇ ಕೆಳಗೆ ಹಾರಿದ್ದ.

ನಾರಾಯಣ ಎಂಜಿನನ್ನು ನಿಲ್ಲಿಸಿ ಮೆಲ್ಲನೆ ಕೆಳಗಿಳಿದ. ಕಾಲುವೆಗಿಳಿದ ಬಸ್ಸಿನ ಮುಂಬಾಗದ ಚಕ್ರ ಒಡೆದುಹೋಗಿತ್ತು. ರೇಡಿಯೇಟರಿನಿಂದ ಹೊಗೆ ಭುಸ್ ಭುಸ್ಸೆಂದು ಹೊರಗೆ ಬರುತ್ತಿತ್ತು.

ನಾರಾಯಣ ಜುವಾನನನ್ನು ಕರೆದ. ಜುವಾನ ಬಂದು ನಿಂತು ವಾಲಿದ ಬಸ್ಸನ್ನು ನೋಡಿದ.

"ಜ್ಯಾಕ್ ತಾ, ಅಲ್ಲಿ ಹಿಂದಿನ ಚಕ್ರಕ್ಕೆ ಕಟ್ಟೆಯಿಡು" ಎಂದು ನಾರಾಯಣ ಅವನಿಗೆ ಆಜ್ಞಾಪಿಸಿದ.

ಬಸ್ಸಿನಲ್ಲಿದ್ದವರೆಲ್ಲರೂ ಆ ಮೇಲೆ ಕೆಳಗಿಳಿದರು. "ಏನು ವೇಗ!" ಎಂದು ಅವರು ಒಳಗೊಳಗೇ ಗೊಣಗುಟ್ಟುತ್ತಿದ್ದರು. ನಾರಾಯಣ ಅವರನ್ನೊಮ್ಮೆ ಕಣ್ಣಾರಳಿಸಿ ನೋಡಿದ.

ಅವನು ಮುಂದೆಹೋಗಿ ಬಸ್ಸಿನ ಚಕ್ರವನ್ನು ಹಿಡಿದು ಹಿಂದೆ ದೂಡಿದ. ಜುವಾನನೂ ಒಂದು ಬದಿಯಲ್ಲಿ ಹಿಡಿದುಕೊಂಡ.

ಆಗ ಪ್ರಯಾಣಿಕರಲ್ಲಿ ಕೆಲವು ಜನರೂ ಬಂದರು. ಎಲ್ಲರೂ ಕೂಡಿ ಎದುರಿನಿಂದ ಬಸ್ಸನ್ನು ಹಿಂದೆ ದೂಡಿದರು. ಮುಂದಿನ ಚಕ್ರ ಹಾಗೂ ಹೀಗೂ ಮೇಲೆ ಬಿತ್ತು. ಆದರೆ ಹಿಂದಿನ ಜೋಡು ಚಕ್ರ ಇನ್ನೂ ರಸ್ತೆಯ ಬದಿಯ ಕಾಲುವೆಯಲ್ಲೇ ಇತ್ತು.

ಪುನಃ ಬದಿಗೆ ಹೋಗಿ ಆ ಚಕ್ರವನ್ನು ಮೇಲೆ ಹಾಕಲು ಯತ್ನಿಸಿದರು. ಆದರೆ ಅದು ಮೇಲೆ ಬರಲಿಲ್ಲ. ಅದು ಒಂದೂವರೆ ಮೊಳದ ಅಂದಾಜು ಆಳವಿದ್ದ ಹೊಂಡದಲ್ಲಿ ಸಿಕ್ಕಿಹೋಗಿತ್ತು. ಅಲ್ಲಿಂದ ಜ್ಯಾಕ್ ಇಟ್ಟು ಎತ್ತಲಿಕ್ಕೂ ಉಪಾಯವಿರಲಿಲ್ಲ.

ಅಷ್ಟರಲ್ಲಿ ಒಂದು ಲಾರಿ ಬಂತು. ಅದರ ಡ್ರೈವರ ನಾರಾಯಣನ ಸ್ನೇಹಿತ. ಅವನು ಅದನ್ನು ನಿಲ್ಲಿಸಿ ಕೆಳಗಿಳಿದು ಬಸ್ಸಿನ ಬಳಿ ಬಂದ.

"ಏನಾಯ್ತು ನಾರಾಯಣಣ್ಣ ?" ಎಂದು ಅವನು ಕೇಳಿದ.

"ಚಕ್ರ ಬರ್ಸ್ಟ್ ಆಯಿತು. ಅದರೊಡ್ನೆ ಗಾಡಿ ಸ್ಕಿಡ್ ಆಗಿ ಸೈಡ್ ಹೊಡೆಯಿತು. ಈಗ ಮುಂದಿನ ಚಕ್ರವನ್ನು ಹೇಗಾದ್ರೂ ಮೇಲಕ್ಕೆತ್ತಿದೆವು. ಆದ್ರೆ ಹಿಂದಿನ ಚಕ್ರ ಅಲ್ಲೇ ಇದೆ.

ಲಾರಿಯ ಡ್ರೈವರ ಇಣಿಕಿ ನೋಡಿದ.

"ಹ್ಯೊ ! ಅದು ಡಬಲ್ ಚಕ್ರ. ಹೊಂಡಕ್ಕಿಳಿದಿದೆ. ಅಲ್ಲಿಯ ಮಣ್ಣು ತುಂಬಾ ಮಿದುವಾಗಿದೆ. ಇದನ್ನು ಹೇಗೆ ಎತ್ತೋದಪ್ಪ !" ಎಂದು ಉದ್ಗರಿಸಿದ.

"ನಮ್ಮ ಗಾಡಿಯ ಬಂಪರಿನಿಂದ ನಿಮ್ಮ ಗಾಡಿಯ ಡಿಫರೆನ್ಸಿಯಲ್ಲಿಗೆ ಒಂದು ಹಗ್ಗ ಕಟ್ಟಿ ಎಳೆದರೆ ಆಗದೆ ?" ಎಂದು ನಾರಾಯಣ ಪ್ರಶ್ನಿಸಿದ.

"ಆಗೋದಾದ್ರೆ ನೋಡೋಣ" ಎಂದು ಲಾರಿಯವ ಅದಕ್ಕೆ ಬೇಕಾದ ಸನ್ನಾಹಗಳನ್ನೆಲ್ಲ ಮಾಡಿದ.

"ನೀವು ಬಸ್ಸನ್ನು ಮಾತ್ರ ಹಿಂದಿನಿಂದ ಸ್ವಲ್ಪ ದೂಡಬೇಕು" ಎಂದು ಲಾರಿಯವ ಹೇಳಿದ.

ಹಾಗೆಯೇ ನಾರಾಯಣನೂ ಇತರ ಕೆಲವು ಪ್ರಯಾಣಿಕರೂ ಬಸ್ಸಿನ ಹಿಂದೆ ಹೋಗಿ ಅದನ್ನು ದೂಡಿದರು. ಲಾರಿಯವ ಅದರಿಂದ ಹಗ್ಗವನ್ನು ತನ್ನ ಲಾರಿಗೆ ಕಟ್ಟಿ ಲಾರಿಯ ಎಂಜಿನನ್ನು ನಡೆಸಿ ಗೀಯರ್ ಹಾಕಿದ.

ಬಸ್ಸು ಹಿಂದು ಮುಂದು ಅಲುಗಾಡಿತು ವಿನಃ ಅಲ್ಲಿಂದ ಕದಲಲಿಲ್ಲ. ಲಾರಿ ಬೊಬ್ಬಿಡುತ್ತಿತ್ತು.

"ಇನ್ನೂ ಚೆನ್ನಾಗಿ ದೂಡೋಣ" ಎಂದು ನಾರಾಯಣ ಓಡು ಕಟ್ಟಿ ದೂಡಿದ.

ಆಗ ಬಸ್ಸಿನ ಮುಂದಿನ ಚಕ್ರ ಉರುಳಿತು. ಹಿಂದಿನ ಚಕ್ರವು ಮಣ್ಣನ್ನು ಕೊರೆಯುತ್ತ ರಸ್ತೆಯಮೇಲೆ ಬಂತು.

"ಸಾಕು, ಪೈಗಳೆ" ಎಂದು ನಾರಾಯಣ ಸಂತೋಷದಿಂದ ಬೊಬ್ಬೆ ಹಾಕಿದ.

ಅವರು ಲಾರಿಯಿಂದ ಕೆಳಗಿಳಿದು ಬಂದರು.

"ಈ ಗಾಡಿಗಳ ಅವಸ್ಥೆಯೇ ಹಾಗೆ", ಅವರೆಂದರು.

"ಲೋಡ್ ಮಾಡಿ ಬಂದೊಡನೆ ಸ್ಕಿಡ್ ಆಗುತ್ತವೆ. ಅದೂ ಈ ತಾರಿನ ರಸ್ತೆಯ ಅವಸ್ಥೆ ಮಳೆಗಾಲದಲ್ಲಿ ಕೇಳುವುದು ಬೇಡ"

"ನಾನು ಸ್ಪೀಡಿನಲ್ಲಿ ಬರ್ತಿದ್ದೆ" ನಾರಾಯಣನೆಂದ "ಗಾಡಿ ಹೇಗೆ ಸೈಡ್ ಹೊಡೆಯ್ತೆಂದು ನನಗೆ ತಿಳಿಯಲಿಲ್ಲ. ಇಷ್ಟೇ ಆದ್ದು ಪುಣ್ಯ. ನಿಮ್ಮ ಉಪಕಾರ ಪೈಗಳೆ"

"ನನ್ಗೂ ಮೊನ್ನೆ ಹೀಗೆ ಆಗಿತ್ತು. ಫುಲ್ ಲೋಡ್ ಮಾಡಿ ಫುಲ್ ಸ್ಪೀಡಿನಲ್ಲಿ ಬರುತ್ತಿದ್ದೆ. ಫಕ್ಕನೆ ಒಂದು ಆಡು ಬಂತು. ಬ್ರೇಕ್ ಹಾಕಿದೆ. ಗಾಡಿ ಒಂದು ಬದಿಯಿಂದ ಇನ್ನೊಂದು ಬದಿಗೆ ಒಮ್ಮೆಲೆ ನೆಗೆಯಿತು! ಈಗ ನಾನು ಎಂಥ ಸಣ್ಣ ಇಳಿಜಾರಿನಿಂದ ಇಳಿಯುವುದಾದರೂ ಸೆಕೆಂಡ್ ಗೇಯರಿನಲ್ಲೇ ಬರುತ್ತೇನೆ. ಈ ತಾರಿನ ರಸ್ತೆಗೆ ಈ ಬ್ರೇಕುಗಳನ್ನು ನಂಬಲಿಕ್ಕಾಗುವುದಿಲ್ಲ."

"ಅದೂ ಈ ಹೈಡ್ರೋಲಿಕ್ ಬ್ರೇಕುಗಳು. ಇವು ಹೇಗೆ ಫೈಲ್ ಆಗ್ತವೆಂದು ನಮ್ಗೆ ತಿಳಿಯೋದೇ ಇಲ್ಲ"

"ಸರಿ, ನಾರಾಯಣಣ್ಣ ನಾ ಹೋಗ್ತೇನೆ. ಚಕ್ರ ನೀವೇ ಬದಲಿಸುತ್ತೀರಲ್ಲ ? ನನಗೆ ಈಗ ಒಂದು ಲೋಡ್ ಕೊಂಡು ಹೋಗಲಿಕ್ಕಿದೆ."

"ಆದೀತು ಪೈಗಳೆ, ನಿಮ್ಮದು ದೊಡ್ಡ ಉಪ್ಕಾರ" ಎಂದು ನಾರಾಯಣ ಅವರನ್ನು ನಮಸ್ಕರಿಸಿ ಬೀಳ್ಕೊಟ್ಟ.

ಜುವಾನ ಬಸ್ಸಿನ ಮೇಲೆ ಹತ್ತಿ ಅಲ್ಲಿದ್ದ ಬಿಡಿ ಚಕ್ರವನ್ನು ತೆಗೆದ. ನಾರಾಯಣನಿಗೆ ತುಂಬಾ ಆಯಾಸವಾಗಿದ್ದರೂ ಅವನು ಮುಂದಿನ ಚಕ್ರದ ಅಡ್ಡಕ್ಕೆ ಜ್ಯಾಕನ್ನಿಟ್ಟು ಅದನ್ನು ತಿರುಗಿಸುತ್ತ ಮೇಲೇರಿಸತೊಡಗಿದ. ಬಸ್ಸಿನ ಭಾರ ಅದರ ಮೇಲೆ ಬಿದ್ದಂತೆ ಅದನ್ನು ತಿರುಗಿಸುವುದೂ ಕಷ್ಟವಾಗುತ್ತಿತ್ತು. ಆಮೇಲೆ ಜುವಾನನೂ ಅದನ್ನು ತಿರುಗಿಸಿದ. ಕೊನೆಗೆ ಚಕ್ರ ಹೇಗಾದರೂ ನೆಲವನ್ನು ಬಿಟ್ಟಿತು. ಅದರ ತಿರುಗಣೆಗಳನ್ನು ತಿರುಗಿಸಿ ತೆಗೆದರು. ಜುವಾನನ ಕೈಯಲ್ಲಿ ಆಗ ಬೊಕ್ಕೆ ಬಂತು.

ನಾರಾಯಣನ ಕೈಯ್ಯೂ ನೋಯುತ್ತಿತ್ತು. ಅಲ್ಲಿ ಒಂದು ಕಾಫೀ ಹೋಟೇಲು ಕೂಡ ಇರಲಿಲ್ಲ.

ಬಸ್ಸು ಆಗಲೇ ಎರಡು ಗಂಟೆ ವಿಳಂಬವಾಗಿತ್ತು. ನಾರಾಯಣ ಮತ್ತೆ ಅದನ್ನು ನಡೆಸಿದ.

"ಸ್ವಲ್ಪ ಮೆಲ್ಲಗೆ ಹೋಗಿ ಡ್ರೈವರರೇ" ಎಂದು ಒಬ್ಬ ಪ್ರಯಾಣಿಕ ಹೇಳಿದ.

"ಹಾಗಾದ್ರೆ ನೀವು ಬಸ್ಸಿನಲ್ಲಿ ಬರ್ಬಾರ್ದಿತ್ತು ಸ್ವಾಮಿ," ನಾರಾಯಣ ಉತ್ತರಿಸಿದ. "ಜೋಡೆತ್ತಿನ ಗಾಡಿಯೇ ನಿಮ್ಗೆ ಒಳ್ಳೆಯದು."

ಮೂಡಬಿದ್ರೆಯಲ್ಲಿ ಬಸ್ಸು ನಿಲ್ಲಿಸಿ ನಾರಾಯಣನೂ ಜುವಾನನೂ ಕಾಫಿ ಕುಡಿದರು. ಅಲ್ಲಿ ಪೋಲೀಸು ಠಾಣೆಯಲ್ಲಿ ಬಸ್ಸು ತಡವಾದುದೇಕೆ ಎಂದು ಪೋಲೀಸರು ಜುವಾನನ್ನು ವಿಚಾರಿಸಿದರು. ಅವನು ಒಂದು ಚಕ್ರ ಒಡೆದು ಹೋಯಿತೆಂದ.

ನಾರಾಯಣ ಆಮೇಲೆ ವೇಗವನ್ನು ಹೆಚ್ಚಿಸಲಿಲ್ಲ. ಅವನ ಕೈ ಕಾಲು ಹೆದರಿಕೆಯಿಂದ ನಡುಗತೊಡಗಿತು. ಬಸ್ಸೇನೋ ಹೊಸದಾಗಿತ್ತು. ಆದರೆ ಅದು ತನ್ನ ಹತೋಟಿಯಲ್ಲಿಲ್ಲವೆಂದು ಅವನಿಗೆ ಹೊಳೆದಿತ್ತು. ಇದು ತನ್ನ ಗ್ರಹಚಾರವೆಂದೇ ಅವನು ನಂಬಿದ್ದ. ಹಿಂದೆ ಅನೇಕಸಾರಿ ಅದಕ್ಕಿಂತಲೂ ವೇಗವಾಗಿ ಬಸ್ಸನ್ನು ಓಡಿಸಿದ್ದುದಿತ್ತು. ಅದೂ ಬೇರೆ ಬೇರೆ ಕಂಪೆನಿಗಳ ಬಸ್ಸುಗಳಿರುವಾಗ ಅವುಗಳೊಳಗೆ ಆಗುತ್ತಿದ್ದ ವೇಗದ ಮೇಲಾಟ ಹೇಳತೀರದು. ಅವುಗಳನ್ನು ಬಿಡುವ ಸಮಯದಲ್ಲಿ ಏನಾದರೂ ಹತ್ತು ನಿಮಿಷ ಇಲ್ಲವೇ ಕಾಲು ಗಂಟೆಯ ವ್ಯತ್ಯಾಸವಿರುತ್ತಿತ್ತು. ಆದರೆ ಮುಂದೆ ಹೋದ ಬಸ್ಸನ್ನು ಹಿಂದಿನಿಂದ ಬರುವ ಬಸ್ಸು ಯಾವಾಗಲೂ ಬೆನ್ನಟ್ಟುತ್ತಿತ್ತು. ಮುಂದಿನವ ಹಿಂದಿನವನಿಗೆ ಹಾದು ಹೋಗಲು ಜಾಗ ಕೊಡುತ್ತಿದ್ದಿಲ್ಲ. ರಸ್ತೆ ಹೆಚ್ಚು ಅಗಲವಾಗಿರುವಲ್ಲಿಯವರೆಗೆ ಹಿಂದಿನವ ಅದರ ಹಿಂದೆಯೇ ಬರುತ್ತಿದ್ದ. ಆಗ ಅವನಿಗೂ ಬಸ್ಸಿನಲ್ಲಿದ್ದವರಿಗೂ ಧೂಳಿನ ಓಕಳಿಯಾಗುತ್ತಿತ್ತು. ಆದರೆ

ಒಂದಿಷ್ಟು ಜಾಗ ಸಿಕ್ಕಿತೆಂದರೆ ಅವನು ಬದಿಯಿಂದ ಸರ್ರನೆ ಮುಂದೆ ನುಸುಳುವ.

ಆ ಕಾಲದಲ್ಲಿ ನಾರಾಯಣ ತನ್ನ ಬಸ್ಸನ್ನು ನಲ್ವತ್ತು ಐವತ್ತು ಮೈಲಿಗಳ ವೇಗದಲ್ಲೂ ನಡೆಸಿದುದಿತ್ತು. ಜಾಗ ಇಲ್ಲದ ಕಡೆ ಚರಂಡಿಯೊಳಗೆ ಚಕ್ರವನ್ನು ಹಾರಿಸಿಯಾದರೂ ಅವನು ಮುಂದಿನ ಬಸ್ಸನ್ನು ಹಿಂದೆ ಹಾಕುವುದಿತ್ತು.

ನಾರಾಯಣ ಈಗೀಗ ವಿಶೇಷ ವೇಗವಾಗಿ ಬಸ್ಸನ್ನು ನಡೆಸುತ್ತಿರಲಿಲ್ಲ. ಆದರೆ ಇಂದು ಏನೋ ಮನಸ್ಸಿನ ಉದ್ವೇಗದಲ್ಲಿ, ಸುತ್ತಲಿನ ಪ್ರಪಂಚವನ್ನು ಮರೆಯಲಿಕ್ಕಾಗಿಯೋ ಎಂಬಂತೆ ಸುಸ್ತ ಆವೇಶದಲ್ಲಿ ಮೇರೆಮೀರಿ ಬಸ್ಸಿನ ವೇಗವನ್ನು ಹೆಚ್ಚಿಸಿದ. ಅದರಿಂದಾಗಿ ಆದ ಪರಿಣಾಮ ಮಾತ್ರ ಅವನನ್ನು ದಂಗುಬಡಿಸಿತ್ತು, ಕಂಗೆಡಿಸಿತ್ತು. ಹಾಗೆ ಬಸ್ಸು ಎಲ್ಲಾದರೂ ಝರಿಯ ಮೇಲೆ ಜಾರುತ್ತಿದ್ದರೆ, ದೊಡ್ಡ ಅಪಘಾತವಾಗುತ್ತಿತ್ತು; ಹತ್ತಾರು ಜನರ ಪ್ರಾಣಕ್ಕೆ ಧಕ್ಕೆ ಬರಬಹುದಿತ್ತು.

ನಾರಾಯಣನಿಗೆ ಹಿಂದೊಮ್ಮೆ ಆಗಿದ್ದ ಅಪಘಾತದ ನೆನಪೂ ಆಗುತ್ತಿತ್ತು.

ಅವನು ಅಂದು ಒಂದು ಇಳಿಜಾರಿನಿಂದ ಕೆಳಗಿಳಿದು ಬರುತ್ತಿದ್ದ. ಬಸ್ಸಿನ ವೇಗ ಹೆಚ್ಚಿತ್ತು. ದಿನಾಲೂ ಅವನು ಅಲ್ಲಿಂದ ಬರುವಾಗ ಸ್ವಿಚ್ಚನ್ನು ತೆಗೆದು ಬಸ್ಸನ್ನು ಓಡಿಸುತ್ತಿದ್ದ. ಹಾಗೆ ಮಾಡಿದರೆ ಪೆಟ್ರೋಲಿನ ಖರ್ಚು ಕಡಿಮೆಯಾಗುತ್ತಿತ್ತು. ಅಂದೂ ಹಾಗೆಯೇ ಬಂದ. ಅಲ್ಲೇ ಕೆಳಗಡೆ ತಿರುಗುವಲ್ಲಿ ವೇಗವನ್ನು ಕಡಿಮೆ ಮಾಡಲು ಬ್ರೇಕನ್ನು ತುಳಿದ. ಆದರೆ ವೇಗ ಕಡಿಮೆಯಾಗಲಿಲ್ಲ. ಇನ್ನೂ ಬಲವಾಗಿ ಅದನ್ನು ತುಳಿದ. ಆಗ ಬ್ರೇಕಿನ ಪೆಡಲ್ ಒಮ್ಮೆಲೇ ಒಳಗೆ ಹೋಯಿತು. ಗಾಡಿಯ ವೇಗ ಹೆಚ್ಚುತ್ತಲೇ ಇತ್ತು. ಬ್ರೇಕ್ ಫ್ಯೆಲ್ ಆಯಿತೆಂದು ಅವನಿಗೆ ತಿಳಿದರೂ ಆ ಗಾಬರಿಯಲ್ಲಿ ಅವನು ಏನನ್ನೂ ಮಾಡಲಾರದವನಾದ. ಎದುರಿನಿಂದ ಇನ್ನೊಂದು ಬಸ್ಸು ಬರುತ್ತಿತ್ತು. ಅವನು ತನ್ನದನ್ನು ಹೇಗೋ ತಿರುಗಿಸಿದ. ತಿರುಗುವ ಜಾಗ ಬಂತೇ ಬಂತು. ನಾರಾಯಣ ತಲೆಗೆ ಕೈಗಳಿಂದ ಬಡೆದುಕೊಂಡ. ಬಸ್ಸಿನೊಳಗಿದ್ದ ಜನರಿಗೆ ಇದು

ಏನೊಂದೂ ಅರ್ಥ ವಾಗುತ್ತಿರಲಿಲ್ಲ. "ಬ್ರೇಕ್ ಫೈಲಾಯಿತು" ಎಂದು ನಾರಾಯಣ ಬೊಬ್ಬಿಡುವುದು ಮಾತ್ರ ಅವರಿಗೆ ಕೇಳಿತು. ಕಂಡಕ್ಟರ್ ಇದನ್ನು ಕೇಳಿ ಒಮ್ಮೆಲೇ ಕೆಳಗೆ ಹಾರಿದ್ದ. ಅವನೊಡನೆ ಮತ್ತಿಬ್ಬರು ಹಾರಿದವರು ರಸ್ತೆಯ ಇನ್ನೊಂದು ಬದಿಯಲ್ಲಿ ಬಿದ್ದಿದ್ದರು. ಮುವ್ವತ್ತೆರಡು ಜನರನ್ನೂ ತುಂಬಿಸಿದ್ದ ಆ ಬಸ್ಸು ಒಂದೇ ಸಮನೆ ರಸ್ತೆಯನ್ನು ಬಿಟ್ಟು ಒಂದು ಸೇತುವೆಯ ಕಲ್ಲಿಗೆ ಢಿಕ್ಕಿ ಹೊಡೆದು ಕೆಳಗೆ ನೆಗೆಯಿತು!

ನಾರಾಯಣ ಆಗ ತನ್ನ ಸೀಟಿನಿಂದ ಕೆಳಗೆ ಹಾರಿ ಬಿದ್ದಿದ್ದ. ಮತ್ತೆ ಎರಡು ದಿನಗಳ ತನಕ ಅವನಿಗೆ ಸ್ಮೃತಿ ಇರಲಿಲ್ಲ. ಬಸ್ಸು ನಜ್ಜುಗುಜ್ಜಾಗಿಹೋಗಿತ್ತು. ಅದನ್ನು ಕೆಲವುದಿನಗಳ ನಂತರ ಮೇಲೆ ತೆಗೆದು ಹಾಕಿದ್ದರು. ಆ ದುರಂತದಲ್ಲಿ ನಾಲ್ಕು ಜನ ಮೃತಪಟ್ಟಿದ್ದರು. ಆರೇಳು ಜನರಿಗೆ ತೀವ್ರ ಗಾಯಗಳಾಗಿದ್ದುವು. ಇಬ್ಬರ ಕಾಲು ತುಂಡಾಗಿತ್ತು. ಮತ್ತೊಬ್ಬನ ಒಂದು ಕಾಲನ್ನೂ ಒಂದು ಕೈಯನ್ನೂ ಆಸ್ಪತ್ರೆಯಲ್ಲಿ ತುಂಡು ಮಾಡಿ ಅವನ ಜೀವವನ್ನು ಬದುಕಿಸಿದ್ದರು. ಕಂಡಕ್ಟರನಿಗೆ ಮಾತ್ರ ಹೆಚ್ಚು ಗಾಯಗಳಾಗಿರಲಿಲ್ಲ. ನಾರಾಯಣನಿಗೂ ವಿಶೇಷ ಗಾಯಗಳಾಗಿರದಿದ್ದರೂ ಅವನಿಗೆ ಬಸ್ಸು ಕೆಳಗೆ ಬೀಳುವಾಗ ಆಗಿದ್ದ ಉದ್ವೇಗದಿಂದಾಗಿ ಸ್ಮೃತಿ ತಪ್ಪಿತು ಅಷ್ಟೆ. ಊರಲ್ಲೆಲ್ಲ ಅಂದು ತಿಂಗಳುಗಟ್ಟಲೆ ಜನರು ಮಾತಾಡುವ ಸುದ್ದಿಯಾಯಿತು. ಪೋಲೀಸರು ನಾರಾಯಣನ ಮೇಲೆ ಖಟ್ಲೆಯನ್ನು ಹೂಡಿದ್ದರು. ಕೆಲವು ತಿಂಗಳು ಅದರ ತನಿಖೆಯಾದ ಬಳಿಕ ನಾರಾಯಣ ನಿರ್ದೋಷಿಯೆಂದೂ ಆ ಅಪಘಾತಕ್ಕೆ ಯಂತ್ರ ಕೆಟ್ಟುಹೋದುದೇ ಕಾರಣವೆಂದೂ ತೀರ್ಮಾನವಾಯಿತು. ಕಂಪೆನಿಯವರು ನಾರಾಯಣನಿಗೆ ಕೆಲಸ ಕೊಡಲೂ ಮತ್ತೆ ಸ್ವಲ್ಪ ಹಿಂದು ಮುಂದು ನೋಡಿದರು. ಆದರೆ ನಾರಾಯಣನಿಗೆ ಒಬ್ಬ ಡೈರೆಕ್ಟರರ ಶಿಫಾರಸು ಸಿಕ್ಕಿತು. ಅವನು ಪುನಃ ಮೋಟರ್ ನಡೆಸಲು ತೊಡಗಿದ್ದ.

ಆ ದುರ್ಘಟನೆಯನ್ನು ನೆನೆದೊಡನೆ ಅವನ ಮನಸ್ಸು ಕುಂದಿಹೋಯಿತು. ಆ ರಕ್ತ, ಆ ಮಾಂಸ, ಆ ಜಖಂ, ಆ ವೇದನೆ, ಆ ನರಳಾಟ—ಇವೆಲ್ಲ ಅವನ ಮುಂದೆ ಜೀವಂತವಾಗಿ ನಿಂತವು. ತನ್ನ

ಮೇಲೆ ತನ್ನೊಬ್ಬನ ಜೀವದ ಹೊಣೆಗಾರಿಕೆ ಮಾತ್ರವಲ್ಲ. ಬಸ್ಸಿನಲ್ಲಿದ್ದ ಮೂವತ್ತು ಮಂದಿ ಪ್ರಯಾಣಿಕರ ಜೀವಕ್ಕೂ ತಾನು ಜವಾಬುದಾರಿಯಾಗಿದ್ದೇನೆಂದು ಅವನಿಗೆ ಆಗ ಹೊಳೆಯಿತು. ಅದನ್ನು ನೆನೆದಷ್ಟೂ ಮೆಲ್ಲನೆ ಬಸ್ಸು ಓಡತೊಡಗಿತು.

"ಇದು ಉಡುಪಿಗೆ ಎಷ್ಟು ಗಂಟೆಗೆ ತಲಪಬೇಕು ?" ಎಂದು ಪ್ರಯಾಣಿಕರೊಬ್ಬರು ಅವನೊಡನೆ ಕೇಳಿದರು.

"ಐದೂವರೆ ಗಂಟೆಗೆ ಮುಟ್ಟಬೇಕಿತ್ತು. "ಎಂದನವ.

"ಈಗ ಏಳು ಕಳೆಯಿತಲ್ಲ ?"

"ಏನಾಯ್ತು ಸ್ವಾಮಿ, ನನ್ಗೆ ಅಲ್ಲೇ ಎರ್ಡು ಗಂಟೆ ಲೇಟ್ ಆಯಿತು. ಅದೂ ಆ ಲಾರಿಯ ಪೈಗಳು ಬಂದದ್ರಿಂದ. ಇಲ್ವಾದರೆ ಮಂಗ್ಳೂರಿಗೆ ಹೇಳಿಕಳ್ಸಿ ಅಲ್ಲಿಂದ ಇವತ್ತು ರಾತ್ರಿಯೋ ನಾಳೆ ಬೆಳಗ್ಗೆಯೋ ಜನ ಬರುವವರೆಗೆ ಕಾಯ್ಬೇಕಿತ್ತು. "

"ಈಗ ತುಸು ವೇಗದಲ್ಲಿ ಹೋಗ್ಬಹುದಲ್ಲ ?" ಎಂದು ಹಿಂದೆ ಕುಳಿತಿದ್ದ ಹೆಂಗಸೊಂದು ಕೇಳಿತು. "ನನ್ಗೆ ಬಸ್ಸಿನಿಂದಿಳಿದು ಎರಡು ಮೈಲು ಹೋಗಬೇಕು. ನಾನೊಬ್ಬಳೇ. "

"ಹಾಗೆ ಸ್ಪೀಡ್ ಬಿಟ್ರೆ ಅಮ್ಮ", ನಾರಾಯಣ ಗಂಟಲನ್ನು ಸರಿಪಡಿಸಿಕೊಳ್ಳುತ್ತ ಹೇಳಿದ. "ಹಾಗೆ ಸ್ಪೀಡ್‌ಬಿಟ್ರೆ ಎಲ್ರ ಜೀವಕ್ಕೂ ಅಪಾಯ ಬಂದೀತು. ಈಗಿನ ಈ ಬಸ್ಸುಗಳನ್ನು ನಂಬ್ಲಿಕ್ಕಾಗೋದಿಲ್ಲ. ಎಲ್ಲಿ ಯಾವ ಸಾಮಾನು ಹಾಳಾಗ್ತದೆಂದು ಹೇಳೋಕೆ ಬರೋದಿಲ್ಲ. ಈಗ ನೀವು ಅಲ್ಲಿ ನೋಡ್ಲಿಲ್ವೆ ?"

"ಈಗೀಗ ಬಸ್ಸಿನೊಳಗೆ ಕುಳಿತವರಿಗೂ ಅಪಾಯವಿದೆ. ರಸ್ತೆಯಲ್ಲಿ ನಡಿಯುವವರಿಗೂ ಅಪಾಯವಿದೆ " ಎಂದು ಮತ್ತೊಬ್ಬರು ಹೇಳಿ ನಕ್ಕರು.

"ಏನು ಸ್ವಾಮಿ, " ನಾರಾಯಣನೆಂದ. "ರಸ್ತೇಲಿ ಹೋಗೋದಂದ್ರೆ ಈಗೀಗ ಜನ್ರು ಏನೂ ಜಾಗ್ರತೆ ಮಾಡೋದಿಲ್ಲ. ಮೇಯ್ಲಿಕ್ಕೆ ಬಿಟ್ಟ ಕೋಣಗಳ ಹಾಗೇ ಹೋಗ್ತಾರೆ. ನಾವು ಮೇಲೆ ಕುಳಿತೋರು ಎಷ್ಟು ಜಾಗ್ರತೆ ಮಾಡ್ಬಹುದು ? ಎಷ್ಟೆಂದ್ರೂ ಇದು ಯಂತ್ರ ತಾನೆ ?

ಇದ್ರ ಚಕ್ರಗಳು ಕುರುಡು. ಅವು ನಾವು ಹೇಳಿದಂತೆ ಇರ್ತವೆಯೆ? ಜನ್ರು ನಮ್ಮನ್ನೇ ಕಣ್ಣು ಕಟ್ಟಿಬಿಡ್ತಾರೆ."

"ನೀವು ಸುಮ್ಮನೆ ಜನರನ್ನು ದೂರುವುದು," ಆ ವ್ಯಕ್ತಿ ಹೇಳಿತು. "ಮೊನ್ನೆ ಮಂಗಳೂರಲ್ಲಿ ಜನರ ನೂಕು ನುಗ್ಗಲು ಇಲ್ಲದ ಒಂದು ರಸ್ತೆಯಲ್ಲಿ ಒಬ್ಬ ಮುದುಕ ಹೋಗುತ್ತಿದ್ದ. ನಾನು ದೂರದಿಂದ ಬರುತ್ತಿದ್ದೆ. ಒಂದು ಕಾರೋ, ಲಾರಿಯೋ, ಬಸ್ಸೋ ಏನೋ ಸರಕ್ಕನೆ ಅವನನ್ನು ನೆಲಕ್ಕಪ್ಪಳಿಸಿ ಹೋಯಿತು. ಮುದುಕ ಪಾಪ ಸತ್ತೇಹೋದ!"

"ಕೆಲವ್ರು ಹಾಗೇ ಮಾಡ್ತಾರೆನ್ನಿ........"

ನಾರಾಯಣ ಅಷ್ಟರಲ್ಲೇ ಮಾತು ನಿಲ್ಲಿಸಿದ. ಅವನು ಆ ಮನುಷ್ಯನ ಮುಖವನ್ನು ಒಂದೆರಡು ಬಾರಿ ದಿಟ್ಟಿಸಿ ನೋಡಿದ. ಅವನೂ ಮುದುಕನಾಗಿದ್ದ. ಬಾಯಿಯಲ್ಲಿ ಕೃತಕ ಹಲ್ಲುಗಳಿದ್ದುವು. ಒಳ್ಳೆಯ ಉಡುಪುಗಳನ್ನು ತೊಟ್ಟಿದ್ದ. ಅವನ ಮುಖವನ್ನು ನೋಡುವಾಗ ಎಲ್ಲವನ್ನೂ ತಿಳಿದವನಂತೆ ನಾರಾಯಣನಿಗೆ ತೋರುತ್ತಿತ್ತು. ಅವನು ಉಲ್ಲೇಖಿಸಿದ ಘಟನೆ ಬೇರಾವುದೂ ಅಲ್ಲವೆಂದು ನಾರಾಯಣನಿಗೆ ಸ್ಪಷ್ಟವಾಯಿತು. ಈ ಮುದುಕ ಬಹುಶಃ ಅಂದು ಅಪಘಾತಕ್ಕೆ ಕಾರಣವಾದ ವಾಹನವನ್ನು ಸರಿಯಾಗಿ ನೋಡಿಲ್ಲವೆಂದು ಅವನು ತುಸು ಸಂತೋಷಪಟ್ಟ. ಆದರೆ ಆ ಬಳಿಕ ಬಸ್ಸು ಇನ್ನೂ ಮೆಲ್ಲಗೆ ಓಡತೊಡಗಿತು. ನಾರಾಯಣನ ಕೈ ಸ್ಪಷ್ಟವಾಗಿ ಆಗ ನಡುಗುತ್ತಿತ್ತು.

"ಮೋಟಾರಿನ ಅಡಿಗೆ ಬಿದ್ದು ಸತ್ತರೆ, ಡ್ರೈವರನಿಗೆ ಫಾಸಿಯಾಗುವುದೇ ವಕೀಲರೇ?" ಎಂದು ಹಿಂದಿನಿಂದ ಒಬ್ಬನು ಮುಂದೆ ಕುಳಿತವರೊಡನೆ ಕೇಳಿದ.

ನಾರಾಯಣನ ಕಿವಿಗಳು ಆಗ ನೆಟ್ಟಗಾದವು: ಅವನಿಗೂ ಯಾರಾದರೂ ಗೊತ್ತಿದ್ದವರೊಡನೆ ಆ ಪ್ರಶ್ನೆಯನ್ನು ಕೇಳಿ ಉತ್ತರ ತಿಳಿಯಬೇಕೆಂಬ ಜಿಜ್ಞಾಸೆ ಇತ್ತು.

"ಫಾಸಿ ಬಿಟ್ಟು ಜೈಲು ಕೂಡಾ ಆಗುವುದಿಲ್ಲ", ಎಂದರು ವಕೀಲರು, ತಮ್ಮ ಕನ್ನಡಕವನ್ನು ಸಂಪಡಿಸುತ್ತ. "ಏನಾದರೂ ಜುಲ್ಮಾನೆಯಾಗುತ್ತದೆ ಅಷ್ಟೆ. ಅದೂ ಅದರ ಬಗ್ಗೆ ತಪ್ಪು ಸ್ಥಾಪನೆಯನ್ನು

ಮಾಡುವುದೇನೂ ಸುಲಭವಲ್ಲಯ್ಯ! ಈ ಡ್ರೈವರರೊಡನೆ ಏನೆಲ್ಲ ಉಪಾಯಗಳಿವೆ! ಒಬ್ಬ ಸ್ಟೀಯರಿಂಗ್ ವ್ಹೀಲೇ ಮುರಿದುಹೋಯಿತೆನ್ನುತ್ತಾನೆ. ಇನ್ನೊಬ್ಬ ಬ್ರೇಕ್ ಫೈಲ್ ಆಯಿತೆನ್ನುತ್ತಾನೆ. ಕೆಲವರು ಮೃತಪಟ್ಟ ವ್ಯಕ್ತಿಯು ರಸ್ತೆಯ ಮಧ್ಯದಿಂದ ನಡೆಯುತ್ತಿದ್ದ. ತಾನು ಹಾರ್ನು ಬಾರಿಸಿ ಅವನನ್ನು ತಪ್ಪಿಸಲಿಕ್ಕೆ ನೋಡಿದೆ, ಆದರೂ ಅವನು ಚಕ್ರದಡಿಗೆ ಬಿದ್ದ ಎನ್ನುತ್ತಾರೆ. ಆದರೆ ಈವರೆಗೂ ಯಾರಾದರೂ ದೈವವಶಾತ್, ಮೃತಪಟ್ಟ ವ್ಯಕ್ತಿಯು ತಾನಾಗಿ ಬಂದು ಬಸ್ಸಿನ ಅಡಿಗೆ ಬಿದ್ದು ಸತ್ತ ಎಂದು ವಾದಿಸಿಲ್ಲ. ಇನ್ನು ಮುಂದೆ ಅಂಥ ವಾದವೂ ಬರಬಹುದು."

ಎಲ್ಲರೂ ವಕೀಲರ ಮಾತನ್ನು ಕೇಳಿ ನಕ್ಕರು. ನಾರಾಯಣನಿಗೂ ಒಂದು ಸುಳ್ಳು ನಗೆ ಬಂತು. ಅವನಿಗೆ ಅವರು ವಕೀಲರೆಂದು ಆತನಕ ತಿಳಿದಿರಲಿಲ್ಲ. ಅವರೆಲ್ಲಾದರೂ ತಾನು ಮಿತಿಮೀರಿ ಬಸ್ಸನ್ನು ಓಡಿಸಿದ್ದಕ್ಕಾಗಿ ಕಂಪನಿಯವರಿಗೆ ದೂರು ಕೊಡಲೂ ಸಾಕೆಂದು ಅವನಿಗೆ ಭಯವಾಯಿತು.

ವಕೀಲರು ನಾರಾಯಣನ ಮುಖವನ್ನೇ ಕ್ಷಣಕಾಲ ನೋಡಿದರು. ಅವನಿಗೆ ಆಗ ತಡೆಯದಾಯಿತು. ಅವರು ತಮ್ಮ ತೀಕ್ಷ್ಣ ನೋಟದಿಂದ ತನ್ನ ಮನಸ್ಸಿನಲ್ಲಿದ್ದ ಇಂಗಿತವನ್ನೆಲ್ಲ ನೋಡುತ್ತಿದ್ದಾರೋ ಎಂದು ಅವನಿಗೆ ಸಂದೇಹವಾಯಿತು.

ಹಿಂದಿನಿಂದ ಬರುತ್ತಿದ್ದ ಬಸ್ಸುಗಳೂ ಲಾರಿಗಳೂ ನಾರಾಯಣ ತಡೆಯಿಲ್ಲದೆ ಅವನ ಬಸ್ಸನ್ನು ಹಾದು ಮುಂದರಿಸಿದುವು. ಎಲ್ಲಿ ಒಂದು ಹಾರ್ನು ಕೇಳಿದರೂ ಅವನು ಬಸ್ಸನ್ನು ರಸ್ತೆಯ ಒಂದು ಬದಿಗೆ ಕೊಂಡು ಹೋಗಿ ನಿಲ್ಲಿಸಿ ಹಿಂದಿದ್ದ ವಾಹನವನ್ನು ಮುಂದೆ ಹೋಗಲು ಕೈಯಿಂದ ಸಂಕೇತಪೂರ್ವಕವಾಗಿ ಸೂಚಿಸುತ್ತಿದ್ದ.

"ನೀನೇನು ಹೊಸ ಡ್ರೈವರನೊ?" ಎಂದು ವಕೀಲರು ಅವನನ್ನು ಕೇಳಿದರು.

ನಾರಾಯಣ ಬೆಚ್ಚಿಬಿದ್ದ. ತನ್ನ ದೌರ್ಬಲ್ಯ ಅವರಿಗೆ ತಿಳಿಯಿತೆಂದು ಭಾವಿಸಿ ಅವನು ತುಂಬ ಕಳವಳಪಟ್ಟ.

"ಇದು ಹದಿನಾರ್ನೇ ವರ್ಷ ಸ್ವಾಮೀ", ಎಂದು ಅವನು ದೈನ್ಯ ದಿಂದ ಉತ್ತರಿಸಿದ.

"ಓಹೋ! ನಾನು ಹಿಂದೆ ನಿನ್ನನ್ನು ಎಲ್ಲೋ ನೋಡಿದ್ದೇನೆ. ಬಹುಶಃ ಇದೇ ಬಸ್ಸಿನಲ್ಲಿ."

"ಹೌದು ಸ್ವಾಮಿ. ಒಮ್ಮೊಮ್ಮೆ ಇದ್ರಲ್ಲೂ ಬರ್ತಿದ್ದೇನೆ."

ವಕೀಲರ ಮಾತಿನ ಪ್ರೌಢಿಮೆ ಅವನನ್ನು ದಂಗುಬಡಿಸಿತು. ಅವರಿಗೆ ತನ್ನ ನಿಜಸ್ಥಿತಿ ಗೊತ್ತಾಗಿರಲೂ ಬಹುದೆಂದು ಅವನು ಊಹಿಸಿದ.

ಬಸ್ಸು ನಿಲ್ದಾಣ ಬಂತು. ಎಲ್ಲರೂ ಬಸ್ಸಿನಿಂದಿಳಿದರು. ವಕೀಲರು ಇಳಿಯುವಾಗ ನಾರಾಯಣ ಅವರಿಗೆ ನಮಸ್ಕಾರ ಮಾಡಿದ. ಅವರೂ ನಗುತ್ತ ಪ್ರತಿಯಾಗಿ ನಮಸ್ಕರಿಸಿದರು. ಅವರೊಡನೆ ಮೋಟರಿನ ತಕ್ಷೀರಿನ ಕುರಿತು ಇನ್ನೂ ಕೇಳೋಣವೇ ಎಂದು ಅವನಿಗೊಮ್ಮೆ ಅನ್ನಿಸಿತು. ಅವನು ಹಾಗೆ ಯೋಚಿಸುತ್ತಿದ್ದಂತೆಯೇ ಅವರು ಮುಂದರಿದು ಹೋದರು.

ಬಸ್ಸನ್ನು ನಿಲುಮನೆಗೆ ಕೊಂಡುಹೋಗಿ ಬಿಡುವಾಗ ರಾತ್ರಿ ಗಂಟೆ ಎಂಟೂವರೆಯಾಗಿತ್ತು. ಅವನು ತನ್ನ ಉಣ್ಣೆಯ ಮಫ್ಲರನ್ನು ಕುತ್ತಿಗೆಗೆ ಸುತ್ತಿಕೊಂಡು ಬಸ್ಸಿನಿಂದ ಕೆಳಗಿಳಿದ.

"ನೀವು ಇಲ್ಲೇ ಮಲಗ್ತೀರೇ?" ಎಂದು ಜವಾನ ಕೇಳಿದ, ತಾನು ಹೊರಡಲು ಅಣಿಯಾಗಿ.

"ಮತ್ತೇನು? ನನ್ನ ಮಾವನ ಮನೆ ಇರುವುದು ಮಂಗ್ಳೂರಲ್ಲಿ" ಎಂದ ನಾರಾಯಣ ನಗುತ್ತ.

೮

ನಾರಾಯಣನಿಗೆ ಉಡುಪಿಯೇನಾದರೂ ಪರಿಚಯವಿಲ್ಲದ ಊರಲ್ಲ. ಅವನು ಈ ಹತ್ತಿಪ್ಪತ್ತು ವರ್ಷಗಳ ಮೋಟಾರಿನ ಕೆಲಸದಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಹೆಚ್ಚು ಕಡಿಮೆ ಎಲ್ಲಾ ಭಾಗಗಳನ್ನೂ ಕಂಡವ. ಸುಬ್ರಮ್ಹಣ್ಯ, ಧರ್ಮಸ್ಥಳ, ಕೊಲ್ಲೂರು, ಉಡುಪಿ ಮುಂತಾದ ಪ್ರಸಿದ್ಧ ಕ್ಷೇತ್ರಗಳಿಗೆ ಅವನು ವರ್ಷ ವರ್ಷವೂ ಜಾತ್ರೆಗಳ ಸಮಯ ಬಸ್ಸನ್ನು

ಕೊಂಡುಹೋಗುತ್ತಿದ್ದ. ಆಗ ರಾತ್ರಿ ಹಗಲೆಂಬುದಿಲ್ಲ. ಎಲ್ಲವೂ ವಿಶೇಷ ಸವಾರಿಗಳು. ಸಿಕ್ಕಿದಷ್ಟು ಜನರನ್ನು ಬಸ್ಸಿನಲ್ಲಿ ತುಂಬಿಸುವುದು, ಅವರನ್ನು ಅಲ್ಲಿಂದ ಒಯ್ಯುವುದು–ಆಗ ಅವನಿಗೆ ಇವಿಷ್ಟೇ ಕೆಲಸ. ಅವನಿಗೆ ಊಟ ಮಾಡಲು ಸಮಯವಿದೆಯೆ, ಕಾಫಿ ಕುಡಿಯಲು ಅವಕಾಶವಿದೆಯೆ ಎಂದು ಆಗ ಯಾರೂ ಯೋಚಿಸುವವರಿಲ್ಲ. ಆಗ ಮನೆಯಿಂದ ಹೊರಟವ ಮತ್ತೆ ಯಾವಾಗ ಪುನಃ ಮನೆಯನ್ನು ಸೇರುವೆನೆಂಬ ಅರಿವು ಅವನಿಗಿಲ್ಲ. ಹಾಗೆ ಅಲೆದಾಡಿದುದಕ್ಕೆ ಅವನಿಗೆ ವಿಶೇಷ ಭತ್ತೆಯೂ ದೊರೆಯುತ್ತಿತ್ತೆನ್ನುವ. ಆದರೆ ಅದು ಕಾಲ ಕಾಲಕ್ಕೆ ಅನ್ನವಿಲ್ಲದೆ ತಿರುಗಾಡುವಾಗ ತಿನ್ನಲಿಕ್ಕೆ ಸಾಕಾಗುತ್ತಿದ್ದಿಲ್ಲ. ಕೆಲವೊಮ್ಮೆ ಕಂಡಕ್ಟರನೊಡನೆ ಒಳಸಂಚು ಮಾಡಿ "ಕಪ್ಪು "ಹಣದ ಪಾಲೂ ಸಿಗುತ್ತಿತ್ತು. ಆದರೆ ಹಾಗೆ ಸಿಕ್ಕಿದ ಹಣವಾದರೂ ಮನೆಗೆ ಸೇರುವಂತಿಲ್ಲ. ಆಗ ಅವನು ಸೇದುವುದು ಸಿಗರೇಟನ್ನೇ. ಕುಡಿಯುವುದು ಓವಲ್ಟಿನನ್ನೇ. ರಾತ್ರಿ ಕೆಲಸ ಮುಗಿದಾದ ಬಳಿಕ ಸ್ವಲ್ಪ ಶರಾಬೂ ಬೀಳ ಬೇಕಾಗುತ್ತಿತ್ತು. ಮತ್ತೆ ಒಮ್ಮೊಮ್ಮೆ ಸಹೋದ್ಯೋಗಿಗಳೊಡನೆ ಮಾಂಸಾಹಾರದ ಸಾಮೂಹಿಕ ಊಟವೂ ಜರುಗುತ್ತಿತ್ತು. ನಾರಾಯಣ ಒಮ್ಮೆ ಮನೆ ಬಿಟ್ಟನೆಂದರೆ ಇಂಥ ಕೂಟಗಳಲ್ಲೆಲ್ಲ ಭಾಗವಹಿಸುತ್ತಿದ್ದ. ಕೆಲವೊಮ್ಮೆ ಉತ್ಸಾಹಕ್ಕಾಗಿ ಹಗಲಿನಲ್ಲೂ ಸ್ವಲ್ಪ ಅವನು ಕುಡಿಯುತ್ತಿದ್ದ. ಆದರೆ ರುಕ್ಕುವಿನ ಎದುರಿಗೆ ಬರುವಾಗ ಅವನು ಬಹಳ ಸಭ್ಯತೆಯಿಂದ ವರ್ತಿಸುತ್ತಿದ್ದ. ತಾನು ಕುಡಿದ ಸುದ್ದಿಯನ್ನೇ ಅವಳಿಗೆ ಹೇಳುತ್ತಿದ್ದಿಲ್ಲ. ಅವಳಿಗೆ ಅದು ಗೊತ್ತಾದರೂ ಅವನೊಡನೆ ಕೂಡಲೇ ಆಕೆ ಪ್ರಶ್ನಿಸುತ್ತಿದ್ದಿಲ್ಲ. ಮತ್ತೆ ಯಾವಾಗಲಾದರೊಮ್ಮೆ ಅದರ ಪ್ರಸ್ತಾಪವನ್ನೆತ್ತಿ ಅವನಿಗೆ ತಮಾಷೆ ಮಾಡುತ್ತಿದ್ದಳು. ಅವನಿಗೆ ಆಗ ನಾಚಿಕೆಯಾಗುತ್ತಿತ್ತು. ಆದರೆ ತನ್ನ ಸಂಬಳದಲ್ಲಿ ಸಿಗುವ ಹಣವನ್ನೆಲ್ಲ ಅವಳಿಗೇ ತಂದು ಕೊಡುತ್ತಿದ್ದ. ಅವನಿಗೆ ಅದಲ್ಲದೆ ಬೇರೆ ಹಣವೂ ಸಿಗುವುದೆಂಬುದು ಅವಳಿಗೆ ಅಷ್ಟಾಗಿ ಗೊತ್ತಾಗಿರಲಿಲ್ಲ. ಆದುದರಿಂದ ಅವನು ಹೀಗೆ ದಿಕ್ಕುಗೆಟ್ಟು ಖರ್ಚುಮಾಡುತ್ತಾನೆಂದು ಅವಳಿಗೆ ತಿಳಿಯಲು ಆಸ್ಪದವೂ ಇದ್ದಿಲ್ಲ. ಒಮ್ಮೊಮ್ಮೆ ಏಳೆಂಟುರೂಪಾಯಿಗಳೂ ಅವನ ಪಾಲಿಗೆ ಬರುತ್ತಿತ್ತು

ಆದರೆ ದಿನಕ್ಕೆ ಒಂದೆರಡು ರೂಪಾಯಿಗಳಾದರೂ ಸಿಗದಿಲ್ಲ. ಈ ಹಣದಲ್ಲಿ ಒಂದು ಪೈಯೂ ಉಳಿಯುತ್ತಿದ್ದಿಲ್ಲ. ಅಂದು ಸಿಕ್ಕಿದುದು ಅಂದೇ ಖರ್ಚಾಗಿ ಹೋಗುತ್ತಿತ್ತು.

ಹಾಗೆ ಅಂದು ರಾತ್ರಿ ಬಸ್ಸಿನ ನಿಲುಮನೆಯಿಂದ ಊಟದ ಹೋಟೇಲಿಗೆ ಹೋದ. ಕಿಸೆಯಲ್ಲಿ ಒಂದೆರಡು ರೂಪಾಯಿಗಳಿದ್ದುವು.

ಅವನು ಊಟಕ್ಕೆ ಕುಳಿತಾಗ ಪೋಲೀಸಿನವನೊಬ್ಬ ಬಂದು ಅವನ ಬದಿಯಲ್ಲಿ ಊಟಕ್ಕೆ ಕುಳಿತ. ನಾರಾಯಣನಿಗೆ ಗಾಬರಿಯಾಯಿತು. ಪೋಲೀಸಿನವ ತುಸು ಹೊತ್ತು ಎಲೆಯನ್ನು ತೊಳೆಯುವುದರಲ್ಲೇ ಮಗ್ನನಾದ. ಆಮೇಲೆ ಅವನ ದೃಷ್ಟಿ ಮೆಲ್ಲನೆ ನಾರಾಯಣನ ಮೇಲೆ ಸುಳಿಯಿತು. ನಾರಾಯಣ ಕಂಗೆಟ್ಟು ಅವನನ್ನು ನೋಡುತ್ತಿದ್ದ.

"ನಿಮ್ಮನ್ನೆಲ್ಲೋ ನಾನು ಹಿಂದೆ ನೋಡಿದ್ದೆ," ಪೋಲೀಸಿನವನೆಂದ. "ಆಗಿರ್ಬಹುದು ಸ್ವಾಮಿ", ಎಂದ ನಾರಾಯಣ, ಒಣ ನಗೆಯೊಡನೆ. ಅಷ್ಟರಲ್ಲಿ ಮಾಣಿ ಅನ್ನದ ತಟ್ಟೆಯನ್ನು ತಂದ. ಇಬ್ಬರ ಎಲೆಗೂ ಅನ್ನ ಬಡಿಸಿದ.

"ಏನ್ರೀ ಪಲ್ಯ ಮೊದಲು ಬಡಿಸೋದುಬಿಟ್ಟು ಅನ್ನ ಹಾಕ್ತೀರಲ್ಲ?" ಎಂದು ಪೋಲೀಸಿನವ ಕೇಳಿದ.

"ಪಲ್ಯ ತರ್ತೇನೆ" ಎಂದು ಮಾಣಿ ಒಳಗೆ ಹೋದ.

"ಅಬ್ಬ!"ಪೋಲೀಸಿನವ ಉದ್ಗರಿಸಿದ. "ಇವರು ಹೋಟೇಲನ್ನಿಡಲು ಎಷ್ಟು ಪುಣ್ಯ ಮಾಡಿದ್ದಾರೋ ಏನೋ! ಕೊಳೆತ ಅನ್ನ, ಹಳಸಿದ ಪಲ್ಯ, ನೀರು ಮಜ್ಜಿಗೆಗಳನ್ನು ಜನರಿಗೆ ಹಾಕಿ ಹಣ ಮಾಡಿ ಅದರ ಪುಣ್ಯವನ್ನು ಎಷ್ಟು ಯುಗಗಳ ವರೆಗೆ ಅನುಭವಿಸುತ್ತಾರೋ!"

"ಹೋಟೇಲಿನ ಅನ್ನವೆಂದ್ರೆ ಅದ್ರಲ್ಲಿ ಕಲ್ಲು ಮುಳ್ಳು ಎಲ್ಲಾ ಇದೆ. ಯಾವ ಕಾಹಿಲೆಯೂ ಇದನ್ನುಂಡ್ರೆ ತನ್ನಿಂದ ತಾನೇ ಬರ್ಬಹುದು." ಎಂದು ನಾರಾಯಣ ನಗುತ್ತ ಟೀಕಿಸಿದ.

"ಇಲ್ಲಿ ಅಕ್ಕಿಯನ್ನು ತೊಳೆಯುತ್ತಾರೆಂದೆಣಿಸಿದಿರಾ?" ಪೋಲೀ

ಸಿನವ ಅನ್ನವನ್ನು ಕಲಸುತ್ತ ಹೇಳಿದ. "ಇದರಲ್ಲಿ ಎಷ್ಟು ಹುಳುಗಳಿ ವೆಯೋ ಎಷ್ಟು ಕ್ರಿಮಿಗಳಿವೆಯೋ ದೇವರೇ ಬಲ್ಲ. ಆದರೂ ನಮಗೆ ಇಲ್ಲಿ ಉಣ್ಣದೆ ನಿರ್ವಾಹವಿಲ್ಲ. ಏನುಮಾಡುವುದು? ಊಟ ಮಾಡದಿ ದ್ದರೆ ಹೊಟ್ಟೆ ಕೇಳುತ್ತದೆಯೆ? "

ಮಾಣಿ ಪಲ್ಯದ ಪಾತ್ರೆಯನ್ನು ತಂದ. ಅದರಿಂದ ಸ್ವಲ್ಪ ಚಟ್ನಿ ಮತ್ತು ಬದನೆಕಾಯಿಯ ಪಲ್ಯವನ್ನು ಇಬ್ಬರ ಎಲೆಗೂ ಬಡಿಸಿದ. ಚಟ್ನಿಯ ಬಣ್ಣ ಕೆಂಪು ಕೆಂಪಾಗಿತ್ತು. ಪಲ್ಯ ಹಸುರಾಗಿ ಕಾಣಿಸು ತ್ತಿತ್ತು.

ಊಟ ಮಾಡುತ್ತಿದ್ದಾಗ ನಾರಾಯಣನಿಗೆ ಆ ಪೋಲೀಸಿನವ ನನ್ನು ಹಿಂದೆ ನೋಡಿದ ನೆನಪು ಬಂತು. ದೂಮ ಸತ್ತ ದಿನ ಅವನು ಮಂಗಳೂರಲ್ಲೇ ಇದ್ದ. ಅಂದು ನಾರಾಯಣ ಬಸ್ಸನ್ನು ನಿಲುಮನೆಗೆ ಕೊಂಡು ಹೋಗುವಾಗ ಅದನ್ನು ನಿಲ್ಲಿಸಿ ಅದನ್ನು ತನಿಖೆ ಮಾಡಿದ್ದ. ಮರುದಿನವೂ ಅದರಲ್ಲಿ ಕುಳಿತು ಆರೇಳು ಮೈಲುಗಳವರೆಗೆ ಬಂದಿದ್ದ. ಈ ನೆನಪು ನಾರಾಯಣನ ಮನಸ್ಸಿನಲ್ಲಿ ಮೂಡಿದೊಡನೆ ಅವನಿಗೆ ಅಲ್ಲಿಂದ ಒಮ್ಮೆಲೇ ಓಡಿ ಹೋಗೋಣವೆಂದೆನ್ನಿಸಿತು. ಆದರೆ ಹಾಗೆ ಮಾಡಿದರೆ ಪೋಲೀಸಿನವ ತನ್ನನ್ನೋಡಿಸಿಕೊಂಡು ಬಂದರೆ ತಾನೇನು ಮಾಡಬಲ್ಲೆನೆಂಬ ಪ್ರಶ್ನೆಯೂ ಅವನಿಗೆ ಹೊಳೆಯಿತು. ಹೀಗೆಂದು ಯೋಚಿಸುತ್ತ ನಾರಾಯಣ ಸಾವಧಾನವಾಗಿ ಊಟಮಾಡಿದ.

"ಏನ್ರೀ ನಿಮ್ಮ ಹೋಟೇಲಿನಲ್ಲಿ ಉಪ್ಪಿನ ಕಾಯಿಯೂ ಇಲ್ಲವೇ? ಏನು ಬರಗಾಲ ನಿಮಗೆ!" ಎಂದು ಪೋಲೀಸಿನವ ಮಾಣಿಗೆ ಗದರಿಸಿದ.

"ಉಪ್ಪಿನಕಾಯಿ ಮುಗಿದಿದೆ. ಉಪ್ಪು ತರುತ್ತೇನೆ" ಎಂದು ಮಾಣಿ ಉತ್ತರಿಸಿದ.

"ಉಪ್ಪು ನಿಮ್ಮ ತಲೆಗೆ! ಒಂದಿಷ್ಟು ಹುಳಿ ತನ್ನಿ. ನಾವೇನಾ ದರೂ ಪಶುಗಳಲ್ಲ, ಇದನ್ನು ಸಪ್ಪೆ ತಿನ್ನಲಿಕ್ಕೆ."

ಮಾಣಿ ಹುಳಿ ಪಲ್ಯವನ್ನೊಂದಿಷ್ಟು ಅವನಿಗೆ ಸೌಟಿನಲ್ಲಿ ಬಡಿಸಿದ.

"ಅವರಿಗೂ ಹಾಕಿ. ಅವರ ಎಲೆಯಲ್ಲೂ ಪಲ್ಯವಿಲ್ಲ" ವೆಂದು ಪೋಲೀಸಿನವ ನಾರಾಯಣನ ಎಲೆಗೆ ಬೆರಳು ತೋರಿಸಿ ಹೇಳಿದ.

ಮಾಣಿ ಮತ್ತೊಂದು ಸೌಟು ಪಲ್ಯವನ್ನು ತಂದು ನಾರಾಯಣನ ಎಲೆಗೆ ಹಾಕಿದ.

ನಾರಾಯಣನಿಗೆ ಆಗ ಎದೆ ಜೋರಾಗಿ ಬಡಿಯುತ್ತಿತ್ತು. ಈ ಪೋಲೀಸಿನವ ತನ್ನನ್ನೇ ಶೋಧಿಸಲಿಕ್ಕಾಗಿ ಬಂದಿರುವನೆಂದು ಅವನಿಗೆ ಖಚಿತವಾಗುತ್ತಿತ್ತು. ಆದರೆ ಪೋಲೀಸಿನವನ ವರ್ತನೆ ವಿಚಿತ್ರ ವಾಗಿತ್ತು. ಅವನು ಊಟ ಮಾಡುವಾಗ ಅವನಿಗೆ ಬಾಹ್ಯ ಪ್ರಪಂಚದ ಪರಿವೆಯೇ ಇರಲಿಲ್ಲ.

ನಾರಾಯಣನ ಊಟ ಬೇಗನೆ ಮುಗಿಯಿತು. ಪೋಲೀಸಿನವನ ಎಲೆಯಲ್ಲಿ ಇನ್ನೂ ಅನ್ನವಿತ್ತು. ಅವನು ನೀರಿಗಾಗಿ ಕಾಯುತ್ತಿದ್ದ.

ನಾರಾಯಣ ಮೆಲ್ಲನೆ ಎದ್ದ. ಪೋಲೀಸಿನವ ಅವನ ಮುಖವನ್ನು ಮತ್ತೊಮ್ಮೆ ನೋಡಿದ. ನಾರಾಯಣನಿಗೆ ಅವನ ಮುಖದಲ್ಲಿ ಅರ್ಥ ಗರ್ಭಿತವಾದ ಗಂಭೀರತೆ ಕಂಡು ಬಂತು. ಅವನ ಮೀಸೆಯಲ್ಲಿ, ದೊಡ್ಡದಾದ ಕಣ್ಣುಗಳಲ್ಲಿ, ಭೀಕರತೆಯೂ ಎದ್ದು ಕಾಣುತ್ತಿತ್ತು.

"ಹೋಗುತ್ತೀರಾ ?" ಎಂದು ನಾರಾಯಣನನ್ನು ಅವನು ಕೇಳಿದ.

"ಹೌದು ಸ್ವಾಮಿ" ಎನ್ನುತ್ತ ನಾರಾಯಣ ಹೊರಗೆ ಹೋದ.

ಅವನಿಗೆ ಕೈಗಳನ್ನು ತೊಳೆಯಲು ಕೂಡಾ ಅಲ್ಲಿ ಮನಸ್ಸು ಬರ ಲಿಲ್ಲ. ಊಟದ ಕೋಣೆಯಿಂದ ಹೊರಟವ ನೇರವಾಗಿ ರಸ್ತೆಗೆ ಇಳಿದು ದೀಪದ ಕಂಭಗಳನ್ನು ತಪ್ಪಿಸಿಕೊಂಡು ಮುಂದೆ ಹೋದ. ಹೋಗು ವಾಗ ಪೋಲೀಸಿನವ ತನ್ನನ್ನು ಹಿಂಬಾಲಿಸುತ್ತಿರುವನೋ ಎಂದು ಆಗಾಗ ತಿರುಗಿ ನೋಡುತ್ತಿದ್ದ. ಇನ್ನು ಎಲ್ಲಾದರೂ ಹೋಗಿ ಒಂದು ಬಾವಿಗೆ ಹಾರಿಬಿಟ್ಟರೆ ಎಲ್ಲವೂ ಮುಗಿಯುತ್ತದೆ ಎಂದು ಅವನು ಯೋಚಿ ಸಿದ.

ಅವನು ಸ್ವಲ್ಪದೂರ ಹೋದಾಗ ದೀಪದ ನೆರಳಿನಲ್ಲಿ ಒಂದು ಹೆಂಗಸು ಅಲೆದಾಡುತ್ತಿರುವುದನ್ನು ಕಂಡು ಕ್ಷಣಕಾಲ ಅಲ್ಲೇ ನಿಂತ. ಜನರು ಅತ್ತಿತ್ತ ಅಲ್ಲಿ ಹೋಗುತ್ತಿದ್ದರು. ಪೋಲೀಸಿನವ ಅವನಿಗೆ ಇನ್ನೂ ಕಾಣುತ್ತಿದ್ದಿಲ್ಲ. ನಾರಾಯಣ ನೋಡುತ್ತಿದ್ದಂತೆಯೇ ಆಕೆ ಅವನ ಬಳಿಗೆ ಬಂದಳು. ಅವನು ಅವಳನ್ನು ಗಮನಿಸದವನಂತೆ ನಟಿಸಿ

ಮತ್ತೂ ಮುಂದರಿದ. ಅವಳು ತುಸುದೂರ ಅವನೊಡನೆಯೇ ಬಂದಳು.

ಅವನ ಮನಸ್ಸಿನಲ್ಲಿ ಆಗ ಕಳವಳವೂ ಆಗುತ್ತಿತ್ತು. ತಾನು ಮರುದಿನ ಮರಳುವುದರೊಳಗೆ ತನ್ನನ್ನು ಅಪರಾಧಿಯೆಂದು ಪೋಲೀಸರು ನಿಶ್ಚಯಿಸಿಬಿಡುವರೋ ಎಂದು ಅವನಿಗೆ ಗಾಬರಿಯಾಗುತ್ತಿತ್ತು. ತಾನಿನ್ನು ತನ್ನ ಮನೆಗೆ ಮರಳಲಿಕ್ಕಿದೆಯೋ, ತನ್ನ ಹೆಂಡತಿ ಮಕ್ಕಳನ್ನು ನೋಡಲಿಕ್ಕಿದೆಯೋ ಇಲ್ಲವೋ ಎಂದು ಅವನು ತವಕಪಡುತ್ತಿದ್ದ. ಆ ನಿಶ್ಶಬ್ದ ವಾತಾವರಣದಲ್ಲಿ ಅವನಿಗೆ ಏನೇನೋ ದೃಶ್ಯಗಳೂ ಕಾಣಿಸಿಕೊಳ್ಳುವುವು. ಒಮ್ಮೆ ಭೂತ ಬಂದಂತೆ ಭಾಸವಾಗುವುದು. ಇನ್ನೊಮ್ಮೆ ಪ್ರೇತವೊಂದು ತನ್ನನ್ನು ಕಂಡು ಹಲ್ಲುಕಿರಿಯುತ್ತಿರುವಂತೆ ತೋರುವುದು. ಅಷ್ಟರಲ್ಲಿ ಬೀದಿಯ ದೀಪಗಳೂ ನಂದಿಹೋದುವು. ಆಗ ತನ್ನ ಮಾವನೇ ತನ್ನ ಎದುರು ಬಂದು ನಿಂತಂತೆ ಅವನಿಗೆ ತೋರಿತು. ಅವನ ಮುಖದಲ್ಲೆಲ್ಲ ರಕ್ತ ಸುರಿಯುತ್ತಿತ್ತು. ಹಣೆ ಒಡೆದುಹೋಗಿತ್ತು. ·ಅದರೊಳಗಿಂದ ಹತ್ತಿಯಂತೆ ಬಿಳಿಯಾದ ಮೆದುಳು ಹೊರಗೆ ಕಾಣುತ್ತಿತ್ತು. ಒಂದು ಕಿವಿ ನೇತಾಡುತ್ತಿತ್ತು. ಮತ್ತೊಂದು ·ಚೂರು ಚೂರಾಗಿ ಹರಿದು ಹೋಗಿತ್ತು. ಕಣ್ಣಿನ ಗೊಂಬೆಗಳು ಮೇಲಕ್ಕೆ ಎದ್ದು ನಿಂತಂತಿದ್ದುವು. ಅವುಗಳ ಬುಡದಲ್ಲಿ ನರಗಳೂ ಕಾಣಿಸುತ್ತಿದ್ದುವು. ಮೂಗು ಒಡೆದು ಚಪ್ಪಟೆಯಾಗಿ ಅದರ ಮೇಲಿನ ಎರಡು ರಂಧ್ರಗಳಿಂದ ಶ್ವಾಸೋಚ್ಛ್ವಾಸ ನಡೆಯುತ್ತಿತ್ತು. ಅದರಿಂದ ರಕ್ತದ ಗುಳ್ಳೆಗಳೂ ಮೇಲಕ್ಕೇಳುತ್ತಿದ್ದುವು. ದವಡೆಯ ಮೂಳೆಗಳು ಮುರಿದಿದ್ದುವು. ಮೇಲಿನ ತುಟಿ ಸಂಪೂರ್ಣವಾಗಿ ಹರಿದುಹೋಗಿ ಹಲ್ಲಿನ ವಸಡು ಮಾತ್ರ ಹೊರಗೆ ಕಾಣುತ್ತಿತ್ತು. ನಾಲಿಗೆಯ ಒಂದು ತುಂಡು ಹೊರಗೆ ನೇತಾಡುತ್ತಿತ್ತು. ಮತ್ತೊಂದು ತುಟಿ ಸೀಳಿಹೋಗಿತ್ತು. ಅದರಿಂದಲೂ ನೆತ್ತರಿನ ಹನಿಗಳು ಕೆಳಗೆ ಬೀಳುತ್ತಿದ್ದುವು. ಗಂಟಲಿನ ನಾಳ ಜಜ್ಜಿಹೋದಂತಿತ್ತು. ಅದರ ಮೇಲಿನಿಂದಲೂ ರಕ್ತದ ಗುಳ್ಳೆಗಳು ಕಾಣಿಸಿಕೊಳ್ಳುತ್ತಿದ್ದುವು. ಮೈಯ್ಯಲ್ಲಿದ್ದ ಬಟ್ಟೆ ಸಂಪೂರ್ಣ ಕೆಂಪಾಗಿತ್ತು. ಕೈಗಳಲ್ಲಿ ಬೆರಳುಗಳಿರಲಿಲ್ಲ.

ಆದರೂ ಸುತ್ತಿಗೆಯಂತಹ ಒಂದು ಉಪಕರಣ ಅದರಲ್ಲಿ ಕಾಣುತ್ತಿತ್ತು. ತೋಳಿನ ಎಲುಬುಗಳು ತುಂಡಾಗಿ ಮಾಂಸ ಖಂಡಗಳು ಜೋತಾಡುತ್ತಿದ್ದುವು. ಎದೆ ಚಪ್ಪಟೆಯಾಗಿತ್ತು. ಅದರಲ್ಲಿ ಒಂದು ಎಲುಬೂ ಕಾಣಿಸುತ್ತಿದ್ದಿಲ್ಲ. ಹೊಟ್ಟೆಯಲ್ಲಿದ್ದ ಜೀರ್ಣಾಂಗಗಳು ಜಜ್ಜಿಹೋಗಿ ಕರುಳಿನ ಒಂದು ಭಾಗ ಹೊರಗೆ ನೇತಾಡುತ್ತಿತ್ತು. ಸೊಂಟದ ಒಂದು ಎಲುಬು ಮುರಿದುಹೋಗಿತ್ತು. ಆದರೂ ಆ ರೂಪ ನೆಟ್ಟಗಾಗಿಯೇ ನಿಂತಿತ್ತು. ಕಣ್ಣುಗಳೆರಡೂ ನಾರಾಯಣನನ್ನೇ ನೋಡುತ್ತಿದ್ದುವು. ಅವುಗಳ ಕರಿಯಗೊಂಬೆಗಳು ಅತ್ತಿತ್ತ ತಿರುಗುತ್ತಿದ್ದುವು. ಅದು ಸುತ್ತಿಗೆಯನ್ನು ಹಿಡಿದ ಕೈಯ್ಯನ್ನುಮೇಲಕ್ಕೆ ಎತ್ತಿತು. ನಾರಾಯಣ ಬೆಚ್ಚಿಬಿದ್ದು ಮುಂದಕ್ಕೆ ಓಡಲು ಯತ್ನಿಸಿದ. ಆದರೆ ಅವನಿಗೆ ಓಡಲು ಹೆದರಿಕೆಯಿಂದಾಗಿ ಕಾಲು ಬರಲಿಲ್ಲ. ಆ ಉದ್ವೇಗದಲ್ಲಿ ಅವನಿಗೆ ಪೋಲೀಸಿನವನ ನೆನಪು ಕೂಡಾ ಆಗಲಿಲ್ಲ.

ಅಷ್ಟರಲ್ಲಿ "ಬರುತ್ತೀರಾ ?" ಎಂಬ ಒಂದು ಧ್ವನಿ ಅವನ ಪಕ್ಕದಿಂದಲೇ ಕೇಳಿತು.

ಅವನು ಜಾಗ್ರತನಾದ. ಕನಸಿನಿಂದೆಚ್ಚತ್ತವನಂತೆ ಆ ಹೆಂಗಸಿನ ವಾತ್ಸಲ್ಯದ ಧ್ವನಿಯನ್ನು ಕೇಳಿ ಅತ್ತ ನೋಡಿದ. ಅವನಿಗೆ ಮಾತಾಡಿದ ವ್ಯಕ್ತಿ ಹೆಂಗಸೆಂಬುದು ಖಚಿತವಾಯಿತು. ಆಕೆಯ ಕೈಗಳಲ್ಲಿದ್ದ ಬಳೆಯೂ ಆಗ ಸದ್ದು ಮಾಡಿತು.

"ಕೇಳುವುದಿಲ್ಲವೆ ? ಕತ್ತಲೆಯಲ್ಲಿ ಎಲ್ಲಿ ಹೋಗುತ್ತೀರಿ ?"

ನಾರಾಯಣನಿಗೆ ಆಗ ರಸ್ತೆಯಲ್ಲಿ ಯಾರೋ ಬರುತ್ತಿರುವ ಸದ್ದು ಕೇಳಿತು. ಆ ಹೆಂಗಸು ಆ ಸದ್ದಿಗೆ ಬೆಚ್ಚಿಬಿದ್ದು ಒಂದು ಮರದ ಅಡ್ಡಕ್ಕೆ ಹೋದಳು. ಅವನೂ ಅವಳೊಡನೆ ಅಲ್ಲಿ ಮರೆಯಲ್ಲಿ ನಿಂತುಕೊಂಡ.

ಸ್ವಲ್ಪ ಹೊತ್ತಿನಲ್ಲೇ ತನ್ನೊಡನೆ ಊಟ ಮಾಡಿದ್ದ ಪೋಲೀಸಿನವ ರಸ್ತೆಯ ಮಧ್ಯದಲ್ಲಿ ಹೋಗುವುದನ್ನು ನಾರಾಯಣ ಕಂಡ. ಅವನ ಕಾಲಿನಲ್ಲಿದ್ದ ದಪ್ಪದ ಮೆಟ್ಟು 'ಜರಕ್ ಜರಕ್' ಎಂದು ಸದ್ದು ಮಾಡುತ್ತಿತ್ತು. ಅವನು ಹೋಗುವಾಗ ಅತ್ತಿತ್ತ ನೋಡುತ್ತಿದ್ದ. ಅವನ ಕೈಯ್ಯಲ್ಲಿ ಒಂದು ಟಾರ್ಚ್ ಲೈಟೂ ಇತ್ತು.

ನಾರಾಯಣ ಮರವನ್ನಪ್ಪಿ ನಿಂತ. ಆ ಹೆಂಗಸು ಅವನ ಕಂಕುಳೊಳಗೆ ತನ್ನ ತಲೆಯನ್ನು ತುರುಕಿಸಿದ್ದಳು. ಅವಳ ಬಿಸಿಯುಸಿರು ಅವನ ಪಕ್ಕಗಳಿಗೆ ತಾಗುತ್ತಿತ್ತು. ಅವಳ ಕೈ ಅವನ ಸೊಂಟವನ್ನು ಅಪ್ಪಿತ್ತು. ನಾರಾಯಣನಿಗೆ ಆಗ ಉದ್ವೇಗದಲ್ಲಿ ಉಸಿರು ಬಿಡಲಿಕ್ಕೂ ಆಗುತ್ತಿದ್ದಿಲ್ಲ. ಪೋಲೀಸಿನವನ ಟಾರ್ಚ್ ಲೈಟಿನ ಬೆಳಕು ನಾಲ್ಕು ಕಡೆಗೂ ಪಸರುತ್ತಿತ್ತು. ಅವನು ಏನನ್ನೋ ಹುಡುಕುತ್ತಿರುವವನಂತೆ ಹೊಂಚು ಹಾಕಿಕೊಂಡು ಮೆಲ್ಲನೆ ನಡೆಯುತ್ತಿದ್ದ. ಒಮ್ಮೆ ಟಾರ್ಚ್ ಲೈಟಿನ ಬೆಳಕು ನಾರಾಯಣ ಮರೆಯಲ್ಲಿ ನಿಂತಿದ್ದ ಮರದ ಮೇಲೂ ಬಿತ್ತು. ಅದರ ಮೇಲಿದ್ದ ಕಾಗೆಗಳೂ ಬಾವಲಿಗಳೂ ಆಗ ಕಿವಿ ಕೀಳುವಂತೆ ಕೂಗತೊಡಗಿದುವು. ಪೋಲೀಸಿನವ ಮುಂದರಿದ. ಅವನ ಒಂದು ತೇಗು ಕೂಡ ನಾರಾಯಣನಿಗೆ ಕೇಳಿತು.

"ಆ ಮಾರಿ ಹೋಗಿಯಾಯ್ತು. ನಾವು ಹೋಗೋಣ," ಎಂದಳು ಆ ಹೆಂಗಸು ನಾರಾಯಣನ ಕೈಯನ್ನು ಹಿಡಿದು.

ನಾರಾಯಣ ಮರುಮಾತಾಡಲಿಲ್ಲ. ಮೂಕನಾಗಿ ಅವನು ಅವಳನ್ನು ಹಿಂಬಾಲಿಸಿದ.

ನಾರಾಯಣನಿಗೆ ಆಗ ತಾನು ಎಲ್ಲಿಗೆ ಹೋಗುತ್ತಿದ್ದೇನೆಂಬ ಪರಿವೆಯೂ ಇರಲಿಲ್ಲ. ಒಟ್ಟಿನಲ್ಲಿ ಅವನಿಗೆ ಈ ಕಟು ಸತ್ಯದ ಸನ್ನಿವೇಶದಿಂದ ಒಮ್ಮೆ ಪಾರಾಗಿ ಕಲ್ಪನಾ ಜಗತ್ತನ್ನು ಸೇರಬೇಕೆಂದಿತ್ತು. ಇಲ್ಲಿ ಪ್ರತಿಯೊಂದು ಮರವೂ, ಪ್ರತಿಯೊಂದು ಕಲ್ಲೂ ತನ್ನನ್ನು ಹಳಿಯುತ್ತಿದೆ, ತನ್ನನ್ನು ಮೂದಲಿಸುತ್ತಿದೆ, ತನ್ನನ್ನು ಅಪರಾಧಿಯೆಂದು ಬೊಬ್ಬಿಟ್ಟು ತೋರಿಸುತ್ತಿದೆ ಎಂದು ಅವನಿಗೆ ಕಲ್ಪನೆಯಾಗುತ್ತಿತ್ತು. ಈ ವಾಸ್ತವತೆಯನ್ನು ಎದುರಿಸುವ ಎದೆಗಾರಿಕೆ ಅವನಿಗಿದ್ದಿಲ್ಲ. ಕ್ಷಣಕ್ಷಣಕ್ಕೂ ತಾನು ಲೋಕದಿಂದ ದೂರ ದೂರ ಹೋಗುತ್ತಿದ್ದೇನೆ ಎಂದು ಅವನಿಗೆ ಭಾಸವಾಗುತ್ತಿತ್ತು.

"ಹೆದರ ಬೇಡಿ. ಇದು ನನ್ನ ಮನೆ. ಯಾರೂ ಇಲ್ಲಿ ಬರುವುದಿಲ್ಲ," ಎಂದು ಅವಳು ಬೀಗ ಬಿಚ್ಚಿ ಬಾಗಿಲು ತೆರೆಯುವಾಗ ಅವನಿಗೆ ಪುನಃ ಹೇಳಿದಳು.

ಬಾಗಿಲು ತೆರೆದೊಡನೆ ಅವನು ಒಳಗೆ ಹೋದ. ಅವಳು ಬಾಗಿಲನ್ನು ಪುನಃ ಭದ್ರವಾಗಿ ಮುಚ್ಚಿ ದೀಪ ಉರಿಸಿದಳು.

"ನೀವೇನು ಮಾತೇ ಆಡುವುದಿಲ್ಲ ? ನಿಮಗೆ ಬಾಯಿ ಬರುವುದಿಲ್ಲವೇ ?" ಎನ್ನುತ್ತ ಆಕೆ ನಾರಾಯಣನ ಬಳಿಗೆ ಬಂದಳು.

"ಮಾತಾಡ್ಲಿಕ್ಕೆ ಬರ್ತದೆ. ಆದರೆ"........ಎಂದು ಅವನು ಅಲ್ಲಿದ್ದ ಒಂದು ಬೆಂಚಿನ ಮೇಲೆ ಕುಳಿತುಕೊಂಡ.

"ಹಂ, ಸದ್ಯ ಬದುಕಿದೆ. ನೀವು ಮೂಕರೋ ಅಲ್ಲ ಕಿವುಡರೋ ಎಂದು ಭಾವಿಸಿದೆ" ಎಂದಳವಳು.

"ನಿನಗೆ ಮೂಕರೂ, ಕಿವುಡರೂ ಯಾರೂ ಆಗುತ್ತಾರಲ್ಲ ?"

"ಹಾಗೆನ್ನಬೇಡಿ. ನೀವು ಬಸ್ಸಿನಿಂದಿಳಿಯುವಾಗ ಸಂತೆಗೆ ಹೋದವಳು ನಾನು ಹಿಂತಿರುಗುತ್ತಿದ್ದೆ. ನಿಮ್ಮನ್ನು ನೋಡಿದೆ. ನೀವು ಊಟಕ್ಕೆ ಹೋದಿರಿ. ನಾನು ಮನೆಗೆ ಹೋಗಿ ನಿಮ್ಮ ಊಟ ಮುಗಿಯುವುದರೊಳಗೆ ಹಿಂದೆ ಬಂದೆ."

"ಓಹೋ ಹಾಗೆಯೇ ?"

"ಹೂಂ. ಮತ್ತೇನು ?"

"ಇಲ್ಲಿ ಬೇರೆ ಯಾರೂ ಇಲ್ಲವೆ ?"

"ಇದ್ದಾರೆ. ಅವರು ಊರಿಗೆ ಹೋಗಿದ್ದಾರೆ. ಇನ್ನೆರಡು ದಿನಗಳ ನಂತರ ಅವರು ಹಿಂದೆ ಬರಬೇಕಷ್ಟೆ."

"ಎಲ್ಲಿ ಊರು ?"

"ಎಲ್ಲಿಯೋ ಪಾವಂಜೆಯ ಬಳಿಯಂತೆ. ನಾನೇನೂ ಅಲ್ಲಿಗೆ ಹೋಗಿಲ್ಲ. ನನಗೆ ಅಲ್ಲಿಯದು ಗೊತ್ತೂ ಇಲ್ಲ."

"ನನ್ನಿಂದ ಏನಾದ್ರೂ ಕಾಸನ್ನು ನೀನು ಇಚ್ಛಿಸಿದ್ರೆ ಸೋತು ಹೋಗ್ತಿ."

"ನನಗೆ ಹಣ ಬೇಡ."

"ಒಳ್ಳೇದಾಯ್ತು."

"ನಾನು ಊಟ ಮಾಡುತ್ತೇನೆ. ನೀವು ಅಲ್ಲೇ ಇರಿ." ಎನ್ನುತ್ತ ಆಕೆ ಅಡುಗೆ ಕೋಣೆಯೊಳಗೆ ಹೋದಳು.

ಅವಳು ಊಟ ಮಾಡುತ್ತಿರುವಾಗ ನಾರಾಯಣ ಮನೆಯನ್ನು ನೋಡಿದ. ಅಲ್ಲಲ್ಲಿ ಚಿತ್ರಪಟಗಳಿದ್ದುವು. ಗಾಜಿನ ಮಣಿಯ ಮಾಲೆಗಳಿದ್ದುವು. ಗಂಡಸರು ಉಡುವ ವಸ್ತ್ರಗಳೂ ಅಂಗಿಗಳೂ ಅಲ್ಲೇ ನೇತಾಡುತ್ತಿದ್ದುವು.

ಅವನಿಗೆ ಇಂಥ ಸನ್ನಿವೇಶ ತಿಳಿಯದುದಲ್ಲ. ರುಕ್ಕು ಅವನ ಕೈ ಹಿಡಿದ ಹೆಂಡತಿಯಾಗಿದ್ದರೂ ಅನೇಕಬಾರಿ ಬೇರೆ ಬೇರೆ ಹೆಂಗಸರೊಡನೆ ಅವನು ರಮಿಸಿದ್ದ. ಮದುವೆಯ ಮುಂಚೆಯೇ ಅವನ ಊರಲ್ಲಿ ಒಬ್ಬಿಬ್ಬರೊಡನೆ ಕಲೆತಿದ್ದ. ಒಬ್ಬಳನ್ನು ಅವನೇ ಬೆನ್ನಟ್ಟಿಕೊಂಡು ಹೋದಂತೆ ಹೋಗಿದ್ದ. ಅವಳು ಎಷ್ಟೋ ಸಲ ಅವನ ಕೇಳಿಕೆಯನ್ನು ತಿರಸ್ಕರಿಸಿದ್ದಳು. ಆದರೂ ಅವಳಿಗೆ ಅವನು ದಿನಾಲೂ ಮಂಗಳೂರಿಂದ ಹೂವನ್ನೋ ರುಚಿರುಚಿಯಾದ ತಿಂಡಿಗಳನ್ನೋ ತಂದುಕೊಡುತ್ತಿದ್ದ. ಒಂದೆರಡು ಸಲ ಅವಳಿಗೆ ರವಕೆಯ ವಸ್ತ್ರವನ್ನೂ ತಂದಿದ್ದ. ಕೊನೆಗೆ ಅವಳು ಅವನಿಗೆ ಮಣಿದಿದ್ದಳು. ಆದರೆ ಅವನಿಗೆ ಅವಳಿಂದ ಹೆಚ್ಚಿನ ಸುಖ ಸಿಗಲಿಲ್ಲ. ಅವನೂ ಹೆದರಿದ್ದ. ಅವಳೂ ಹೆದರಿದ್ದಳು. ಏನೋ ಅವನು ಅವಳನ್ನೊಮ್ಮೆ ಅಪ್ಪಿ ಹಿಂದಿರುಗಿದ್ದ. ಆ ಬಳಿಕ ಮಂಗಳೂರಲ್ಲಿ ನಿಂತಾಗ ಅವನಿಗೆ ಇನ್ನೂ ಹೆಚ್ಚು ಹೆಚ್ಚು ಹೆಂಗಸರ ಪರಿಚಯವಾಗತೊಡಗಿತು. ಅಲ್ಲಿ ಕೇರಿಗಳಿಗೂ ಒಮ್ಮೊಮ್ಮೆ ಮುಂಡಪ್ಪನಿಗೆ ತಿಳಿಯದಂತೆ ಹೋಗುತ್ತಿದ್ದ. ಅಲ್ಲದೆ ಕೆಲವು ಸಲ ಹೋಟೇಲಿನ ಜಗಲಿಯಲ್ಲಿ ಮಲಗುವಾಗ ಅಲ್ಲಿಯೂ ಹೆಂಗಸರು ಸಿಗುತ್ತಿದ್ದರು.

ರುಕ್ಕುವನ್ನು ಮದುವೆಯಾದ ಬಳಿಕವೂ ಅವನಿಗೆ ಹೆಂಗಸರ ಬಯಕೆ ಪೂರ್ಣ ನಿಂತಿರಲಿಲ್ಲ. ಆದರೆ ರುಕ್ಕುವಿಗೆ ಅದು ತಿಳಿಯದಂತೆ ಜಾಗ್ರತೆಯಲ್ಲಿರುತ್ತಿದ್ದ. ಅದು ಮುಖ್ಯವಾಗಿ ಒಂದು ನಿಂದನೀಯವಾದ ಕೃತ್ಯವೆಂದು ಅವನು ಭಾವಿಸಿದ್ದ.

ಬಸ್ಸಿನಲ್ಲಿ ಹೋಗುವಾಗ ಸುಂದರಿಯರಾದ ಹೆಂಗಸರಿದ್ದರೆ ಅವನಿಗೆ ಉಲ್ಲಾಸವಾಗುತ್ತಿತ್ತು. ಆಗ ವಿವಿಧ ಭಾವ ಭಂಗಿಗಳಿಂದ ಮೋಟಾರು ನಡೆಸುತ್ತಿದ್ದ. ಬೇರೆ ಬೇರೆ ನಮೂನೆಯಲ್ಲಿ ಹಾರ್ನು ಬಾರಿಸುತ್ತಿದ್ದ. ಅವರೊಡನೆ ಮಕ್ಕಳಿದ್ದರೆ ಆ ಮಕ್ಕಳೊಡನೆ ಮಾತಾ

ಡುತ್ತಿದ್ದ. ಉಳಿದ ಪ್ರಯಾಣಿಕರೊಡನೆ ಹೆಂಗಸರಿಗೆ ಕೇಳುವಂತೆ ವಿನೋದವಾಡುತ್ತಿದ್ದ. ಆಗ ಅವನು ಒಳ್ಳೆಯ ಸಿಗರೇಟುಗಳನ್ನೇ ಸೇದುತ್ತಿದ್ದ. ತಲೆಯನ್ನು ಆಗಾಗ ಬಾಚಿಕೊಳ್ಳುತ್ತಿದ್ದ. ಅವನ ಬಸ್ಸಿನಲ್ಲಿ ಪ್ರಯಾಣ ಮಾಡಿದ ಎಷ್ಟೋ ಮಂದಿ ಹೆಂಗಸರಿಗೆ ಮತ್ತು ಮಕ್ಕಳಿಗೆ ಅವನ ಹೆಸರು ಕೂಡಾ ಗೊತ್ತಿತ್ತು.

ಅವನಿಗೆ ಈಗ ಬೇಕಾಗಿದ್ದುದು ಒಂದು ಸುರಕ್ಷಿತವಾದ ಸ್ಥಳ ಮಾತ್ರ. ಪೋಲೀಸಿನವ ಬಹುಶಃ ತನ್ನನ್ನೇ ಹುಡುಕುತ್ತ ಹೋಗಿರಬೇಕೆಂದು ಅವನು ಅಲ್ಲಿ ಕುಳಿತುಕೊಂಡು ಕಲ್ಪಿಸುತ್ತಿದ್ದ. ಬಹುಶಃ ಮರುದಿನ ತನ್ನನ್ನು ಅವನು ಸೆರೆ ಹಿಡಿಯಲೂ ಬಹುದೆಂದು ಅವನಿಗೆ ಸಂಶಯವಾಯಿತು. ಬಹುಶಃ ಹೆಣ್ಣಿನೊಡನೆ ತಾನು ಸಂಸರ್ಗವನ್ನು ಮಾಡುವುದು ಇದು ಕೊನೆಯ ಬಾರಿಯಾಗಲೂ ಬಹುದು. ಎಂದು ಅವನು ಊಹಿಸಿದ. ಇದರ ಬಳಿಕ ತಾನು ಪ್ರಾಣವನ್ನು ಕಳೆಕೊಳ್ಳುವುದು ಉತ್ತಮವೆಂದೂ ಅವನು ನಿರ್ಧರಿಸಿದ.

ಅವಳು ಇನ್ನೂ ಊಟ ಮಾಡುತ್ತಿದ್ದಳು. ಆಕೆಯ ಬಳೆಗಳ ಖಣ ಖಣ ಶಬ್ದ ಅವನಿಗೆ ಕೇಳುತ್ತಿತ್ತು. ಅದನ್ನು ಕೇಳಿದಂತೆ ಅವನ ಮನಸ್ಸು ಹಿಗ್ಗುತ್ತಿತ್ತು. ಅವಳ ಒಡನಾಟಕ್ಕಾಗಿ ಅವನು ತವಕ ಪಡುತಿದ್ದ.

ಕೊನೆಗೆ ಅವಳು ಹೊರಬಂದಳು.

೯

" ನೀವೇನು ಎಲೆ ಅಡಿಕೆ ತಿನ್ನುತ್ತೀರಾ ? " ಎಂದು ಆಕೆ ನಾರಾಯಣನನ್ನು ಕೇಳಿದಳು.

" ಯಾರಾದ್ರು ಕೊಟ್ರೆ ಬೇಡವೆನ್ನೋದಿಲ್ಲ ನಾನು " ಎಂದನವ ನಸುನಗುತ್ತ.

ಆಕೆ ಚಿಮಣಿ ದೀಪವನ್ನು ಹಿಡಿದುಕೊಂಡು ಒಳಗೆ ಹೋದಳು. ಅಲ್ಲಿ ವೀಳ್ಯದೆಲೆಯ ಹರಿವಾಣವನ್ನು ಅವಳು ಹುಡುಕಿ ಅದರಲ್ಲಿ ವೀಳ್ಯ

ದೆಲೆಯನ್ನು ಹಾಕಿ, ಅಡಿಕೆಯನ್ನು ಹೋಳು ಮಾಡುವುದು ಅವನಿಗೆ ಕೇಳುತ್ತಿತ್ತು.

ದೀಪದೊಡನೆ ಆಕೆ ಹೋದಾಗ ಅವನು ಅವಳ ಮುಖವನ್ನೊಮ್ಮೆ ನೋಡಿದ್ದ. ಅವಳ ಚಲುವು ಅವನ ಮನಸ್ಸನ್ನು ಸೆಳೆದಿದ್ದಿತು. ಅವಳ ಪ್ರಾಯ ಇನ್ನೂ ಇಪ್ಪತ್ತೈದಕ್ಕಿಂತ ಹೆಚ್ಚಾಗಲಿಕ್ಕಿಲ್ಲ. ಮುಖ ಅರಳಿದ ಪುಷ್ಪದಂತಿತ್ತು. ರುಕ್ಮವಿಗಿಂತಲೂ ಒಂದು ಪಾಲು ಹೆಚ್ಚು ಚಲುವೆ ಆಕೆ. ಮುಖದಲ್ಲಿ ಮನವನ್ನಾಕರ್ಷಿಸುವ ಒಂಪು ನಲಿಯುತ್ತಿತ್ತು. ಆಕೆಯ ತುಟಿಯಮೇಲೆ ತುಂಟ ನಗೆಯ ಛಾಯೆ ಸುಳಿಯುತ್ತಿತ್ತು. ಕಣ್ಣುಗಳಲ್ಲಿ ಮಾರ್ಮಿಕತೆ ಹೊರಸೂಸುತ್ತಿತ್ತು. ಅವುಗಳ ಗೊಂಬೆಗಳು ನಸು ನೀಲಿ ಬಣ್ಣದವು. ರೆಪ್ಪೆಗಳು ಅರಳಿದ ಹೂಗಳಂತೆ ಕಾಣುತ್ತಿದ್ದರೂ ಅವುಗಳು ಆ ಕಣ್ಣುಗಳ ಗಾತ್ರಕ್ಕೆ ಹೆಚ್ಚು ದೊಡ್ಡದಿದ್ದಂತೆ ತೋರುತ್ತಿದ್ದುವು. ಹುಬ್ಬುಗಳು ನೀಳವಾಗಿ ಒಂದು ಕೆನ್ನೆಯಿಂದ ಇನ್ನೊಂದಕ್ಕೆ ತೆಳುವಾಗಿ ಬಾಚಿದಂತಿದ್ದುವು. ಗುಂಗುರು ಕೂದಲಿನ ಜಡೆಯನ್ನು ಸುತ್ತಿ ಆಕೆ ತಲೆಯ ಹಿಂದೆ ಕಟ್ಟಿದ್ದಳು. ಅದರ ಮೇಲೆ ಬಿಳಿ ಮತ್ತು ಕೆಂಪು ಹೂಗಳ ಮಾಲೆಯನ್ನು ಮುಡಿದಿದ್ದಳು. ಕಿವಿಗಳಲ್ಲಿ ಚಿಕ್ಕ ಚಿಕ್ಕ ಬೆಂಡೋಲೆಗಳಿದ್ದುವು. ಅವುಗಳಲ್ಲಿದ್ದ ಬಿಳೀ ಕಲ್ಲುಗಳು ದೀಪದ ಬೆಳಕಿಗೆ ಹೊಳೆಯುತ್ತಿದ್ದುವು. ಅವಳ ಚಿಕ್ಕ ಮೂಗು ಕಣ್ಣುಗಳ ಬುಡದಿಂದ ನೇರವಾಗಿ ತುಟಿಗಳ ಮೇಲೆ ಚಾಚಿತ್ತು. ಮುಖದ ಮೇಲೆ ಅದರ ರೇಖೆ ಅಷ್ಟು ಸ್ಪಷ್ಟವಾಗಿ ಮೂಡಿರಲಿಲ್ಲ. ಕೆನ್ನೆಗಳು ಉಬ್ಬಿದ್ದುವು. ದವಡೆಗಳಲ್ಲಿ ಮಾಂಸ ತುಂಬಿ ಅವು ಉರುಟಾಗಿದ್ದುವು. ಅವಳು ನಗುವಾಗ ತುಟಿಗಳ ಬದಿಗಳಲ್ಲಿ ಗುಳಿಗಳು ಬೀಳುತ್ತಿದ್ದುವು. ತುಟಿಗಳು ಒಂದಕ್ಕೊಂದು ಅಪ್ಪಿದಂತ್ತಿದ್ದುವು. ಆಕೆಯ ಸಣ್ಣ ಗಲ್ಲವು ತುಸು ಮೊನೆಚಾಗಿತ್ತು. ಮುಖ ಕೆಂಪಾಗಿ ಕಾಣುತ್ತಿತ್ತು. ದೇಹವು ದೃಢವಾದುದು. ಸಾಧಾರಣ ನಿಲುವಿಕೆ ಅವಳದು. ಅವಳನ್ನು ಇಷ್ಟು ಸ್ಪಷ್ಟವಾಗಿ ನೋಡಿದೊಡನೆ ನಾರಾಯಣನಿಗೆ ಎಲ್ಲವೂ ಮರೆತುಹೋಗಿತ್ತು.

ಈ ಹೆಂಗಸು ವ್ಯಭಿಚಾರ ವೃತ್ತಿಯವಳೇ ಆಗಿರಲಿಕ್ಕಿಲ್ಲವೆಂದು

ಅವನಿಗೆ ತೋರುತ್ತಿತ್ತು. ಮತ್ತೆ ತನ್ನನ್ನೇಕೆ ಅವಳು ಆಶ್ರಯಿಸಿದಳು ? ತನ್ನನ್ನೇಕೆ ಆಮಂತ್ರಿಸಿದಳು ? ತನ್ನಲ್ಲಿ ಅವಳಿಗೆ ಮೆಚ್ಚುಗೆಯಾಗುವಂಥ ರೂಪವಿದೆಯೆ ? ಇಲ್ಲವೇ ಅವಳಿಗೆ ಬೇಕಾದಷ್ಟು ದ್ರವ್ಯವನ್ನು ತಾನು ಕೊಟ್ಟೇನು, ಕೊಡಬಲ್ಲೆನು ಎಂದು ಆಕೆ ಆಭಾಸಪಟ್ಟು ತನ್ನನ್ನು ಇಲ್ಲಿಗೆ ಆಕೆ ಕರೆದು ತಂದಳೆ ? ಆ ಊರಲ್ಲಿ ಇಂಥಾ ವ್ಯವಹಾರ ಬೇಕಾದಷ್ಟು ನಡೆಯುತ್ತಿತ್ತೆಂಬುದು ಅವನಿಗೆ ಮೊದಲೇ ಗೊತ್ತಿತ್ತು. ಈ ಹಿಂದೆ ಅವನು ಅಲ್ಲಿ ತಂಗಿದ್ದಾಗ ಹಲವು ಸಲ ಇಂಥ ಹೆಂಗಸರ ಉಪಚಾರವನ್ನು ಪಡೆದಿದ್ದ. ಅವನ ಕೆಲವು ಸಹೋದ್ಯೋಗಿಗಳಿಗೆ ಅಲ್ಲಿ ನಿತ್ಯದ ಮನೆಗಳೂ ಇದ್ದುವು. ಹೀಗಿದ್ದರೂ ನಾರಾಯಣ ಇಂಥ ಹೆಂಗಸನ್ನ ಎಂದೂ ಎದುರಿಸಿದ್ದಿಲ್ಲ. ಆ ಮನೆಯನ್ನು ನೋಡುವಾಗ, ಅದರ ವ್ಯವಸ್ಥೆಯನ್ನು ಪರಿಶೀಲಿಸುವಾಗ, ಅದು ಇಂಥ ಕೃತ್ಯಗಳಿಗಾಗಿ ಉಪಯೋಗಿಸುವ ಮನೆಯಲ್ಲವೆಂದು ವ್ಯಕ್ತವಾಗುತ್ತಿತ್ತು. ಅವಳ ಮಾತುಗಳು, ಅವಳ ವರ್ತನೆ, ಅವಳ ಹಾವಭಾವಗಳನ್ನು ನೋಡುವಾಗಲೂ ಅವಳು ಅಡ್ಡದಾರಿ ಹಿಡಿದ ಹೆಂಗಸೆಂದು ತೋರುತ್ತಿರಲಿಲ್ಲ. ಎಲ್ಲಕ್ಕಿಂತಲೂ ಹೆಚ್ಚಾಗಿ ನಾರಾಯಣನಿಗೆ ಆಕೆಯ ಚಲುವು ಅಪ್ರತಿಮವಾದುದೆಂದು ಮನನವಾಗಿತ್ತು. ತಾನು ತಪಸ್ಸು ಮಾಡಿದರೂ ಇಂಥಾ ಸುಂದರಿಯನ್ನು ಪಡೆಯಲಾರೆನೆಂದು ಅವನು ಭಾವಿಸಿದ್ದ.

ಅವಳು ವೀಳ್ಯದೆಲೆಯ ತಟ್ಟೆಯನ್ನು ತಂದು ಅವನ ಮುಂದಿಟ್ಟು ನೆಲದಮೇಲೆ ಕುಳಿತುಕೊಂಡಳು. ಅವನು ಅವಳ ಸೌಂದರ್ಯವನ್ನು ಈಕ್ಷಿಸುತ್ತ ಒಂದೊಂದೇ ಎಲೆಯನ್ನು ತೆಗೆದು ಅದನ್ನು ವಸ್ತ್ರಕ್ಕೆ ಸವರಿ, ಅದಕ್ಕೆ ಅಂಟಿದ್ದ ಕೊಳೆಯನ್ನು ತೆಗೆದು ಮೆಲ್ಲಮೆಲ್ಲನೆ ಸುಣ್ಣವನ್ನು ಹಚ್ಚಿ ಅದನ್ನು ಮಡಚಿ ಬಾಯಿಯೊಳಗೆ ತಂಬಿಸಿದ. ಎರಡು ಮೂರು ಎಲೆಗಳನ್ನು ಹೀಗೆ ನಿಧಾನವಾಗಿ ಬಾಯಿಯೊಳಗೆ ಸೇರಿಸಿ ಅಡಿಕೆ ಹೋಳುಗಳನ್ನು ಹಾಕಿ ಅವುಗಳೊಡನೆ ಜಗಿಯತೊಡಗಿದ. ಅಲ್ಲೇ ಹೊಗೆಸೊಪ್ಪಿನ ಒಂದು ತುಂಡು ಇತ್ತು. ಅದರಿಂದ ಒಂದು ತುಂಡನ್ನು ತೆಗೆದು ಅದಕ್ಕೆ ಸುಣ್ಣ ಹಚ್ಚಿ ಬೆರಳಿನಿಂದ ತಿಕ್ಕಿ ಅದನ್ನೂ ಜಗಿಯತೊಡಗಿದ.

" ಹೊಗೆಸೊಪ್ಪು ಸ್ವಲ್ಪ ಖಾರವಿದೆ. ಹೆಚ್ಚು ತಿಂದರೆ ತಲೆ ತಿರುಗೀತು " ಎಂದಳಾಕೆ.

" ಹೂಂ. ಚಿಂತಿಲ್ಲ. ನನ್ಗೇನೂ ಹಾಗಾಗ್ದು. ಎಂಥೆಂಥ ಖಾರದ ಸೊಪ್ಪನ್ನು ನಾನು ತಿಂದಿದ್ದೇನೆ !" ಎಂದು ಅವನು ಗಟ್ಟಿಯಾಗಿ ನಕ್ಕ.

" ಉಗುಳುವ ಪಾತ್ರೆ ತರುತ್ತೇನೆ " ಎಂದು ಆಕೆ ಎದ್ದುಹೋಗಿ ಕಂಚಿನ ಪೀಕದಾನಿಯನ್ನು ತಂದು ಅವನ ಕೈಗೆ ಕೊಟ್ಟಳು.

ಅವನು ಅದಕ್ಕೆ ಉಗುಳಿದ. ಎಂಜಲು ಕೆಂಪು ಕೆಂಪಾಗಿತ್ತು. ಅವನ ಮುಖ ಆಗ ಬೆವರತೊಡಗಿತು. ಕಣ್ಣಿನಲ್ಲಿ ತುಸು ತೂಕಡಿಕೆ ಬಂದಂತಾಯಿತು. ಹೊಟ್ಟೆಯಲ್ಲಿ ನೋವಾಗತೊಡಗಿತು. ಬಾಯಿಯಲ್ಲಿ ಸಪ್ಪೆ ನೀರು ಬಂತು. ಅವನಿಗೆ ಕುಳಿತುಕೊಳ್ಳಲಾಗಲಿಲ್ಲ. ಬಾಯಿಯಲ್ಲಿದ್ದ ಎಲೆಯಡಿಕೆಯನ್ನೆಲ್ಲಾ ಪೀಕದಾನಿಗೆ ಉಗುಳಿದ. ಅವಳು ಹೊಗೆಸೊಪ್ಪು ಹೆಚ್ಚು ಖಾರವಿದೆಯೆಂದು ಹೇಳಿದುದು ನಿಜವೆಂದು ಆಗ ಅವನಿಗೆ ತೋರಿತು.

" ಏನು ನಾನು ಹೇಳಿದ ಹಾಗೆಯೇ ಆಯಿತೇ ? " ಎಂದು ಅವಳು ನಗುತ್ತ ಅವನ ಮನಸ್ಸನ್ನರಿತವಳಂತೆ ಕೇಳಿದಳು.

" ಹೌದು " ಎಂದು ಅವನು ಉತ್ತರಿಸಿದ. ತನ್ನ ದೌರ್ಬಲ್ಯವು ಹೀಗೆ ವ್ಯಕ್ತವಾದುದಕ್ಕಾಗಿ ಅವನಿಗೆ ತುಸು ನಾಚಿಕೆಯೂ ಆಯಿತು.

"ಸ್ವಲ್ಪ ಮಜ್ಜಿಗೆ ಕುಡಿಯುತ್ತೀರಾ ?" ಎಂದು ಆಕೆ ಕೇಳಿದಳು.

"ಹೂಂ, ಸ್ವಲ್ಪ ಉಪ್ಪು ಹಾಕಿ ತನ್ನಿ" ಎಂದನವ.

"ಹೊಗೆಸೊಪ್ಪಿನ ಅಮಲಿಗೆ ಅದೇ ಪರಿಹಾರ" ವೆನ್ನುತ್ತ ಅವಳು ಎದ್ದು ಒಳಗೆ ಹೋಗಿ ಒಂದು ಲೋಟ ಮಜ್ಜಿಗೆ ತಂದಳು.

ನಾರಾಯಣ ಅದನ್ನು ಕುಡಿದ. ಮತ್ತೆ ಸ್ವಲ್ಪ ಸಮಯದಲ್ಲಿ ಅವನ ತಲೆ ತಿರುಗುವಿಕೆ ಶಾಂತವಾಯಿತು.

"ನಿಮಗೆ ಬಹುಶಃ ಅಮಲು ಪದಾರ್ಥ ಹಿಡಿಸುವುದಿಲ್ಲವೆಂದು ತೋರುತ್ತದೆ".

"ಹೂಂ. ಅಮಲೇನು ? ನಾನು ಬಾಟ್ಲಿಗಟ್ಲೆ ಶರಾಬು ಕುಡಿಯು

ಬಲ್ಲೆ. ಆದ್ರೆ ಈ ಹೊಗೆಸೊಪ್ಪಿನ ಅಭ್ಯಾಸ ನನ್ಗಿಲ್ಲ ನೋಡಿ. ನಾನು ಬೀಡಿ ಸೇದುವವ".

"ನಿಮ್ಮೊಡನೆ ಬೀಡಿಯಿಲ್ಲವೆ ?"

"ಇದೆ", ಎಂದು ಅವನು ತನ್ನ ಜೇಬಿಗೆ ಕೈಹಾಕಿ ಬೀಡಿಯ ಕಟ್ಟನ್ನು ತೆಗೆದು ಅದರಿಂದ ಒಂದು ಬೀಡಿಗೆ ಬೆಂಕಿಹಚ್ಚಿಸಿ ಸೇದ ತೊಡಗಿದ.

"ನೀವೇನು, ಮಾತಾಡುವುದೇ ಇಲ್ಲವಲ್ಲ ! ಬಹಳ ವ್ಯಸನ ದಲ್ಲಿರುವಂತೆ ತೋರುತ್ತದೆ."

ನಾರಾಯಣನಿಗೆ ಪುನಃ ಅವಳು ತನ್ನ ಇಂಗಿತವನ್ನು ತಿಳಿದಳೆಂದು ಆಶ್ಚರ್ಯವಾಯಿತು. ಆದರೂ ಅವನದನ್ನು ವ್ಯಕ್ತಪಡಿಸಲಿಲ್ಲ. ಸಲುಗೆ ಯನ್ನು ಬೆಳೆಸುವುದು ಅವನಿಗೆ ಅಷ್ಟು ಸುಲಭವಾದ ಕೆಲಸವಾಗಿರಲಿಲ್ಲ.

"ವ್ಯಸನವೇನು ? ಹ್ಹ ! ನಾನು ಯಾವಾಗ್ಲೂ ಹೀಗೇ ಇರುವವ", ಎಂದು ಅವನು ತಿಳಿಯಾಗಿ ಹೇಳಿದ.

"ಅಲ್ಲ, ನಿಮ್ಮನ್ನು ನಾನು ಈ ಹಿಂದೆ ನೋಡಿಲ್ಲವೆಂದು ನೀವು ಭಾವಿಸಬೇಡಿ. ನಿಮ್ಮ ಬಸ್ಸಿನಲ್ಲಿ ನಾಲ್ಕೈದುಸಲ ಹೋಗಿದ್ದೇನೆ. ಆ ಪರಿಚಯದಿಂದಲೇ ನಿಮ್ಮನ್ನು ಇಷ್ಟು ಕಾದು ನಿಂತು ಇಲ್ಲಿಗೆ ಕರೆದು ತಂದೆ."

"ಓಹೋ ! " ನಾರಾಯಣನೆಂದ. "ಬಸ್ಸಿನಲ್ಲಿ ದಿನಾ ಎಷ್ಟು ಜನ ಪ್ರಯಾಣಮಾಡುತ್ತಾರೆ ! ಅವ್ರುದ್ದೆಲ್ಲ ಗುರ್ತು ನಮ್ಗೆ ಉಳಿಯೋದಿಲ್ಲ. ನಾವು ಬಸ್ಸು ನಡೆಸುವವ್ರು. ಬಸ್ಸಿಗೂ ನಮ್ಗೂ ಏನೂ ಭೇದವಿಲ್ಲ. ಪ್ರಯಾಣಮಾಡುವವ್ರು ಕಂಪ್ನಿಗೆ ಹಣ ಕೊಡ್ತಾರೆ. ನಮ್ಗೆ ಕಂಪ್ನಿ ಹಣ ಕೊಡ್ತದೆ. ಅಷ್ಟೆ. ಪ್ರಯಾಣ ಮಾಡೋವ್ರು ನಮ್ಮೊಡ್ನೆ, ಮಾತ್ನಾಡಲೂ ಕೂಡ್ದೆಂದು ಕಂಪ್ನಿಯವ್ರು ಬೋರ್ಡು ಹಾಕ್ಸಿದ್ದಾರೆ".

"ಆಗಿರಬಹುದು. ಆದರೆ ನಾನು ಚಿಕ್ಕವಳಿದ್ದಾಗ ನಿಮ್ಮ ಬಸ್ಸಿ ನಲ್ಲಿ ಊರಿಗೆ ಹೋಗುತ್ತಿದ್ದೆ. ನನ್ನ ತಂದೆ ನಿಮ್ಮ ಸ್ನೇಹಿತರಾಗಿದ್ದರು. ಆಗ ನೀವು ಕ್ಲೀನರರಾಗಿದ್ದಿರಿ. ನಾನು ಮಂಗಳೂರಲ್ಲಿ ಸಾಲೆಗೆ ಹೋಗುತ್ತಿದ್ದೆ."

"ಏನೋ! ನನ್ಗೆ ನೆನ್ಪಿಲ್ಲ. ಆಗ ನೀವು ಚಿಕ್ಕ ಹುಡ್ಗಿಯಾಗಿರ್ಬೇಕು ಈಗ ಬೆಳೆದು ಹೆಂಗ್ಸಾಗಿದ್ದೀರಿ."

"ನಿಜ" ಎಂದಳವಳು.

ಆ ಮೇಲೆ ತುಸು ಹೊತ್ತು ಇಬ್ಬರೂ ಉರಿಯುತ್ತಿದ್ದ ದೀಪವನ್ನೇ ನೋಡುತ್ತ ಕುಳಿತರು. ಒಬ್ಬರಿಗೊಬ್ಬರು ಮಾತಾಡಲಿಲ್ಲ. ನಾರಾಯಣನ ಮನಸ್ಸು ಈ ಸಂಭಾಷಣೆಗಳಿಂದಾಗಿ ತಣ್ಣಗಾಗಿತ್ತು. ಅವನು ಬೆಂಕಿಯ ನಾಲಿಗೆ ಹೊಗೆ ಕಾರುವುದನ್ನೇ ದಿಟ್ಟಿಸುತ್ತಿದ್ದ. ಆ ನಾಲಿಗೆಯ ಮೇಲೆ ಎಷ್ಟೋ ಪತಂಗಗಳು, ಕೀಟಗಳು ಬಂದು ಕುಳಿತುಕೊಳ್ಳುತ್ತಿದ್ದುವು. ಮರುಕ್ಷಣದಲ್ಲೇ ಅವು ಬೆಂದು ಕೆಳಗೆ ಬೀಳುತ್ತಿದ್ದುವು. ನಾರಾಯಣನಿಗೆ ಇದು ಸೋಜಿಗವೆನಿಸಿತು. ನಿಮಿಷಕ್ಕೆ ಹತ್ತಾರು ಜೀವಗಳು ಹೀಗೆ ನಾಶವಾಗುತ್ತಿದ್ದರೂ ಯಾರೂ ಅವನ್ನು ಗಮನಿಸುವವರಿಲ್ಲ. ಯಾರನ್ನೂ ಅಪರಾಧಿಗಳೆಂದು ಬೊಟ್ಟಿಟ್ಟು ಸೂಚಿಸುವವರಿಲ್ಲ. ಆದರೆ ಒಬ್ಬ ನರಮನುಷ್ಯ ಸತ್ತೊಡನೆ ಏನು ಗೊಂದಲ ಏನು ಸುದ್ದಿ! ಹಾಗೆ ಸಾಯಲು ಕಾರಣನಾದವನನ್ನು ಹಿಡಿಯಲು ಎಷ್ಟು ದೊಡ್ಡ ಪೋಲೀಸು ಫೌಜು! ಅವನು ಸಿಕ್ಕಿದರೆ ಅವನ ಮೇಲೆ ಖಟ್ಲೆಯೇನು! ಅವನ ವಿಚಾರಣೆಯೇನು! ಸಾಕ್ಷಿಗಳಿಗೆ ಸವಾಲು, ಪಾಟಿಸವಾಲುಗಳೇನು! ಅವನಿಗೆ ಶಿಕ್ಷೆಯಾದರೆ ಅದನ್ನು ತಿಳಿದು ಎಷ್ಟುಮಂದಿ ಸುಖದಿಂದ ತೇಗುವವರು! ಅವನನ್ನು ಬಿಟ್ಟರೆ ಎಷ್ಟುಮಂದಿ ಅವನೊಡನೆ ಮೆರೆಯುವವರು! ಸಾವು ನೋವುಗಳು ಈ ಚಿಕ್ಕ ಪ್ರಾಣಿಗಳಿಗೂ, ಮನುಷ್ಯನಿಗೂ ಒಂದೇ. ಅವುಗಳಲ್ಲೇನೂ ಭೇದವಿಲ್ಲ! ಒಂದುವೇಳೆ ಈ ಕೀಟಗಳು ತಮ್ಮ ಸರ್ಕಾರವನ್ನು ಸ್ಥಾಪಿಸಿದ್ದಲ್ಲಿ ಮತ್ತೆ ಎಲ್ಲಿಯೂ ದೀಪ ಉರಿಸಬಾರದೆಂದು ವಿಧಿಸಲೂ ಸಾಕು!

"ನಿಮಗೆ ನಿದ್ದೆ ಬರುತ್ತದೆಂದು ಕಾಣುತ್ತದೆ," ಅವಳು ಹೀಗೆನ್ನುತ್ತ ನಾರಾಯಣನ ಯೋಚನೆಗಳನ್ನು ಭೇದಿಸಿದಳು. "ಬನ್ನಿ ಮಲಗೋಣ. ಇಲ್ಲಿ ಕೋಣೆಯಲ್ಲಿ ಹಾಸಿಗೆ ಹಾಸಿದ್ದೇನೆ."

ನಾರಾಯಣ ಮೌನದಿಂದ ಅವಳನ್ನು ಹಿಂಬಾಲಿಸಿ ಕೋಣೆಯೊಳಗೆ ಹೋದ. ಅಲ್ಲಿ ದೊಡ್ಡದೊಂದು ಮಂಚವಿತ್ತು. ಅದರ ಮೇಲೆ

ದಪ್ಪದ ಹಾಸಿಗೆ ಹಾಸಿತ್ತು. ಅವನಿಗೆ ಅವನ್ನು ಕಂಡು ದಿಗ್ಭ್ರಮೆಯಾಯಿತು. ಯಾವ ಹೆಂಗಸೂ ಅವನನ್ನು ಅತನಕ ಈ ಪರಿಯಲ್ಲಿ ಉಪಚರಿಸಿರಲಿಲ್ಲ. ಅಂಥ ಹೆಂಗಸರ ಮನೆಯಲ್ಲಿ ಹಾಸಿಗೆ ಬಿಟ್ಟು ಸರಿಯಾದ ಚಾಪೆ ಕೂಡಾ ಇರುತ್ತಿರಲಿಲ್ಲ. ಅವೂ ಬೆವರಿನಿಂದ ಕರಗಿ ಹೋಗಿ ವಾಸನೆ ಬರುವಂಥದ್ದು. ಅದರಲ್ಲಿ ತಿಗಣೆಗಳ ಸಾವಿರಾರು ಕುಟುಂಬಗಳು ವಾಸಿಸುತ್ತಿದ್ದುವು. ಅವರಿಗೆ ಮಾತಾಡಲಿಕ್ಕೆ ಬಿಟ್ಟು ಅವನನ್ನು ನೋಡಲಿಕ್ಕೆ ಕೂಡಾ ಸಮಯ ಸಿಗದು. ಎಲ್ಲವೂ ಅವಸರದಲ್ಲೇ ಆಗಬೇಕು. ಎಷ್ಟೋ ಸಲ ಅಂಥ ಹೆಂಗಸರು ಅವನನ್ನು ಬಚ್ಚಲು ಮನೆಗೆ ಕರೆದುಕೊಂಡು ಹೋಗಿದ್ದರು. ಕೆಲವರು ದನಕರುಗಳಿದ್ದ ಹಟ್ಟಿಗೆ ಅವನನ್ನು ಒಯ್ದು ಅಲ್ಲಿ ಅವನನ್ನು ಕೂಡಿದ್ದರು. ಇನ್ನು ಕೆಲವರು ಯಾರದೋ ಮನೆಯ ಗೋಡೆಯ ಹಿಂದೆ ಅವನನ್ನು ಕೊಂಡು ಹೋಗಿದ್ದರು. ಅಂಥ ಪ್ರಸಂಗಗಳಲ್ಲಿ ಆ ಮನೆಯವರಿಗಾಗಲೀ, ಅಲ್ಲಿಯ ನಾಯಿಗಳಿಗಾಗಲೀ ಎಚ್ಚರವಾದರೆ, ಅವನು ಹಿಂದೆಯೇ ಓಡಿಬರಬೇಕಿತ್ತು ! ಅವನ ಒಬ್ಬ ಪ್ರಣಯಿಯು ಅವನನ್ನು ರಸ್ತೆಯ ಚರಂಡಿಯೊಳಗೆ ಕೂಡಾ ಇಳಿಸಿದ್ದಳು ! ಅಲ್ಲಿಯ ಕಲ್ಲುಮಣ್ಣು ಧೂಳುಗಳೊಡನೆ ಅವನು ಅವಳ ದೇಹದ ಮೇಲೆ ಹೊರಳಾಡಿದ್ದ. ಇಂಥ ವೈವಿಧ್ಯಪೂರ್ಣವಾದ ಅವನ ಎಲ್ಲ ನೆನಪುಗಳನ್ನೂ ಈ ದೃಶ್ಯ ಅಲ್ಲಗಳೆಯುವಂತಿತ್ತು. ಎಲ್ಲ ಬಿಟ್ಟು ರುಕ್ಕುವಿನೊಡನೆ ಅವನು ಮಲಗುವ ಕೋಣೆ ಕೂಡಾ ಇಷ್ಟು ಸಜ್ಜಾಗಿರಲಿಲ್ಲ. ಇದನ್ನು ಕಂಡು ಅವನಿಗೆ ಅವಳ ವಿಚಾರವಾಗಿ ತಿಳಿಯಬೇಕೆಂಬ ಜಿಜ್ಞಾಸೆ ಉಕ್ಕಿ ಬಂತು. ತನ್ಮಧ್ಯೆ ಪೋಲೀಸರೇನಾದರೂ ಸೇರಿ ತನ್ನನ್ನು ಸೆರೆ ಹಿಡಿಯಲು ಈ ಬೋನನ್ನು ನಿರ್ಮಿಸಿದ್ದಾರೋ ಎಂಬ ಸಂದೇಹವೂ ಅವನಿಗಾಗದಿರಲಿಲ್ಲ.

ಕೋಣೆಯಿಡೀ ಊದುಬತ್ತಿಯ ಸುವಾಸನೆ ತುಂಬಿತ್ತು. ಹಾಸಿಗೆಯ ರೇಶ್ಮೆಯ ಹೊದಿಕೆ ಬೆಳಕಿಗೆ ಹೊಳೆಯುತ್ತಿತ್ತು. ಅವನು ಭ್ರಾಂತನಂತೆ ಮೇಲೆ ನೋಡುತ್ತಿದ್ದ.

"ಹೂಂ, ಮಲಗು, ದೀಪ ನಂದಿಸುತ್ತೇನೆ", ಎಂದು ಅವಳು ಆಜ್ಞಾಪಿಸಿದಳು.

ನಾರಾಯಣ ತನ್ನ ಕಾಲುಗಳನ್ನು ಅಲ್ಲಿದ್ದ ಒಂದು ವಸ್ತ್ರಕ್ಕೆ ಒರಸಿ ಹಾಸಿಗೆಯಮೇಲೆ ಉರುಳಿದ. ಅವಳೂ ದೀಪನಂದಿಸಿ ಅವನ ಬದಿಗೆ ಉರುಳಿದಳು. ಆ ಮೃದುವಾದ ಹಾಸಿಗೆಯನ್ನು ಅವನು ಸವರಿ ನೋಡುತ್ತಿದ್ದ.

"ನಿಮ್ಮ ಹೆಸರು ನಾರಾಯಣ ಎಂದಲ್ಲವೆ ?" ಎಂದು ಆಕೆ ಮತ್ತೆ ಅವನನ್ನು ಕೇಳಿದಳು.

"ಹೌದು. ನಿಮ್ಗೆ ಹೇಗೆ ಅದು ಗೊತ್ತಾಯಿತು ?"

"ನಾನು ನಿಮ್ಮನ್ನು ಹಾಗೆ ಕರೆಯುವುದನ್ನು ಕೇಳಿದ್ದೆ."

"ಆದ್ರೆ ಒಂದು ನಾ ನಿಮ್ಮೊಡ್ನೆ ಕೇಳ್ತೇನೆ", ನಾರಾಯಣನೆಂದ. "ನಿಮ್ಗೆ ನನ್ನ ಮನ್ಸಿನಲ್ಲಿದ್ದುದನ್ನು ತಿಳಿಯೋ ಶಕ್ತಿ ಇದೆಯೆ ? ನಿಜ ಹೇಳಿ."

"ನಾನು ಹೇಗೆ ಹೇಳಬಲ್ಲೆ ?" ಎಂದು ಆಕೆ ಕತ್ತಲಲ್ಲಿ ನಕ್ಕಳು. ಅವಳು ಇನ್ನೂ ಅವನನ್ನು ಮುಟ್ಟಿರಲಿಲ್ಲ.

" ಅಲ್ಲ, ನೀವು ಪ್ರತಿಸಲವೂ ನಾನು ಮಾತಾಡುವಾಗ ನಾ ಯೋಚಿಸುವುದನ್ನೇ ಹೇಳಿದ್ರಿ. ಉದಾಹರ್ಣೆಗೆ ನನ್ಗೆ ವ್ಯಸ್ನ ಇದೆಯೆ ಎಂದು ಒಮ್ಮೆ ಕೇಳಿದ್ರಿ. ನಿಜ್ವಾಗಿಯೂ ಅದು ಸತ್ಯ. ನನ್ಗೆ ವ್ಯಸ್ನ ಇದೆ."

" ನಿಮಗೆ ಹಾಗೆ ತೋರಿರಬಹುದು," ಅವಳೆಂದಳು. "ಬಹುಶಃ ಅದು ನನ್ನದೊಂದು ವಿಶೇಷ ಗುಣವಾಗಿರಬೇಕು. ಹೀಗೆಂದು ಹೇಳಿದವರು ನೀವು ಮೊದಲಲ್ಲ. ಹೀಗೆಯೇ ಹಿಂದೆ ಹಲವಾರು ಬಾರಿ ಬೇರೆಯವರು ಹೇಳಿದ್ದಾರೆ."

" ಅದು ನಿಮ್ಗೆ ಹೇಗೆ ಗೊತ್ತಾಗ್ತದೆ ?"

" ನಾನು ಹೇಗೆಂದು ಹೇಳಲಿ ? ಯಾರದಾದರೂ ಮುಖವನ್ನು ನೋಡಿದೊಡನೆ ಅವರ ಗುಣ, ಸ್ವಭಾವ, ಮನೋಭಾವ ಇವೆಲ್ಲ ಹೀಗೆಯೇ ಇರಬೇಕೆಂದು ನನಗೆ ಹೇಗೋ ಅನ್ನಿಸುತ್ತದೆ. ನಾನಾಗಿ ಅದಕ್ಕೆ ಪ್ರಯತ್ನ ಪಡುವುದಿಲ್ಲ. ನನಗೆ ಹೊಳೆದುದನ್ನು ನಾನು ಹೇಳಿದರೆ ಕೇಳುವವರಿಗೆ ಆಶ್ಚರ್ಯವಾಗುತ್ತದೆ, ಅಷ್ಟೆ."

" ಆದ್ರೂ ನಿಮ್ಗೆ ಏನೋ ಒಂದು ಶಕ್ತಿ ಇರ್ಬೇಕು."

"ಶಕ್ತಿಯೇನು ? ಈಗ ನಿಮ್ಮ ವಿಷಯವೇ ಹೇಳುತ್ತೇನೆ. ನಿಮ್ಮನ್ನು ನಾನು ಕೊನೆಯ ಸಲ ಕಂಡು ಹತ್ತು ವರ್ಷಗಳಾದರೂ ಕಳೆದು ಹೋಗಿರಬಹುದು. ಆದರೆ ನಿನ್ನೆ ನನಗೆ ನಿಮ್ಮದು ನೆನಪಾಯಿತು. ನೀವು ಈವತ್ತು ಇಲ್ಲಿಗೆ ಬರಲೂ ಬಹುದೆಂದು ನಾನು ಹಾರೈಸಿದೆ. ಹಾಗೆಯೇ ಸಂಜೆಗೆ ಹೋಗುತ್ತಿದ್ದಾಗ ಪುನಃ ನಿಮ್ಮ ನೆನಪಾಯಿತು. ನಾನು ಅಲ್ಲೇ ಕಾದು ನಿಂತೆ. ನೀವು ಬಂದಿರಿ. ನಿಮ್ಮ ಗುರುತು ನನಗೆ ಸಿಕ್ಕಿತು. ಆದರೆ ಆಗ ಮಾತಾಡಲಿಕ್ಕಾಗಲಿಲ್ಲ. ನೀವು ಹೋಟಲಿಗೆ ಹೋದಿರಿ. ನಿಮ್ಮ ಹಿಂದೆಯೇ ಆ ಪೋಲೀಸಿನವನೂ ಊಟಕ್ಕೆ ಹೋದ........"

"ಅವನು ಏನು ಯೋಚಿಸುತ್ತಿದ್ದನೆಂದು ನಿನಗೆ ತಿಳಿಯಿತೆ ?"

"ಅವನೂ ನಿಮ್ಮನ್ನು ಕಾಯುತ್ತಿದ್ದಂತೆ ನನಗೆ ತೋರಿತು. ಆದರೆ ನಿಮಗೆ ಸಂಶಯವಾಗಬಾರದೆಂದು ಅವನು ಬಯಸಿದ್ದ. ನೀವು ಬಸ್ಸಿನಿಂದ ಇಳಿಯುವುದಕ್ಕೆ ಸ್ವಲ್ಪ ಮುಂಚಿತವಾಗಿಯೇ ಅವನು ಬಂದಿದ್ದ. ಏಕೆಂದು ನನಗೆ ಹೇಳಲಾಗದು, ಮತ್ತೆ ನಾವು ಮರದ ಮರೆಯಲ್ಲಿ ನಿಂತಿರುವಾಗಲೂ ಅವನು ನಿಮ್ಮನ್ನೇ ಹುಡುಕಿಕೊಂಡು ಹೋಗಿದ್ದನೆಂದು ನನಗೆ ತೋರುತ್ತದೆ. ನೀವು ನನ್ನನ್ನು ಕಂಡು ನನ್ನೊಡನೆ ಹಿಂದೆ ಹೆಜ್ಜೆ ಹಾಕದಿರುತ್ತಿದ್ದರೆ ಅವನು ನಿಮ್ಮನ್ನು ಪುನಃ ಕಾಣಬಹುದಿತ್ತು. ಆದರೆ ಅವನ ಲೆಖ್ಖ ತಪ್ಪಾಯಿತು."

"ಲೆಖ್ಖ ಅಂದ್ರೆ ?"

"ಊಹನೆ"

"ಏನೋ ನನ್ಗೆ ಇದೆಲ್ಲಾ ಗೊತ್ತಾಗೋದಿಲ್ಲ. ನಿಮ್ಮ ಪೋಲೀಸಿನವ ಏನನ್ನೂ ಹೇಳಿಲ್ಲವಷ್ಟೆ ? ನೀವು ಅವ್ನಿಗಾಗಿ ನನ್ನನ್ನು ಇಲ್ಲಿ ಕರೆದು ತರ್ಲಿಲ್ಲವಲ್ಲ ?"

"ಛೆ ! ನೀವೇನೆನ್ನುತ್ತೀರಿ ? ನನಗೇಕೆ ಅವನ ಸಹವಾಸ ? ನಾನು ಅವನಿಗಾಗಿ ನಿಮ್ಮನ್ನು ವಂಚಿಸುವವಳೆ ? ಇಲ್ಲ, ಎಂದಿಗೂ ಇಲ್ಲ. ನಿನ್ನೆ ನಿಮ್ಮ ನೆನಪಾದಬಳಿಕ ನಾನು ನಿಮಗಾಗೇ ಪರಿತಪಿಸುತ್ತಿದ್ದೆ. ಇಂದು

ಮಧ್ಯಾಹ್ನ ನೀವು ಎಲ್ಲಾದರೂ ಬರಲಾರಿರೋ ಎಂದು ನನಗೆ ಹೊಳೆಯಿ ತೊಮ್ಮ...."

"ಹೌದು ನನ್ನ ಬಸ್ಸುಹಾಳಾಗಿ, ನಾನು ಸಾಯುವುದ್ರಲ್ಲಿದ್ದೆ. ಅಲ್ಲಿಯತನ್ಕ ಅಷ್ಟು ವೇಗವಾಗಿ ಏಕೋ ಬಂದುಬಿಟ್ಟೆ."

"ಸರಿ. ಆಮೇಲೆ ಪುನಃ ನೀವು ಬರುತ್ತೀರಿ ಎಂದು ನಾನು ಗ್ರಹಿಸಿದೆ. ಬಸ್ಸು ಹಾಳಾದುದು ನನಗೆ ತಿಳಿಯದು."

"ಅದೇನೇ ಇರ್ಲಿ. ಇವತ್ತು ಬೆಳಗ್ಗೆ ಕಾರ್ಕಳಕ್ಕೆ ಒಂದು ಟ್ರಿಪ್ ಹೊಡೆದು ಹಿಂದೆ ಮಂಗ್ಳೂರಿಗೆ ಹೋದೆ. ಅಲ್ಲಿಂದ ಪುನಃ ಬಸ್ಸು ನಡೆ ಯಿಸಿದೆ. ನನ್ಗೇಕೋ ಒಮ್ಮೆ ಉಡ್ಪಿಯನ್ನು ಮುಟ್ಟಿಬಿಡೋಣ ಎಂದು ಅನ್ನಿಸ್ತು. ಚೆನ್ನಾಗಿ ಎಕ್ಸಲೇಟ್ರನ್ನು ಒತ್ತಿದೆ. ಬಸ್ಸು ಓಡ್ತ್ತಾಡ್ಗಿತ್ತು. ಗಂಟೆಗೆ ಐವತ್ತು ಮೈಲು ಸ್ಪೀಡಿನಲ್ಲಿ ನಾಬಂದಿರ್ಬೇಕು. ನಾ ಆಗ ಧೃತಿಕೆಟ್ಟವನಂತಿದ್ದೆ. ನನ್ಕಣ್ಣುಗಳು ರಸ್ತೆಯಮೇಲೆ ನೆಟ್ಟುಹೋಗಿ ದ್ದುವು. ಕೈಗ್ಳು ಹೇಗೋ ಸ್ಟೇರಿಂಗನ್ನು ತಿರ್ಗಿಸ್ತಿದ್ವು. ಎಷ್ಟು ಸ್ಪೀಡ್ನಲ್ಲಿ ನಾ ಹೋಗ್ತಿದ್ದೇನೆ, ಎಲ್ಲಿಗೆ ಬಂದಿದ್ದೇನೆ ಇವೆಲ್ಲ ನನ್ಗೆ ಒಂದೂ ತಿಳೀಲಿಲ್ಲ. ಕೊನೆಗೆ ಟೈರ್ ಬರ್ಸ್ಟ್ ಆದ್ಮೇಲೆ ತಾನೇ ನನ್ಗೆ ಎಚ್ರ ಆದ್ದು. ಪುಣ್ಯದಲ್ಲಿ ಬಸ್ಸು ಏನೋ ಕೆಳ್ಗೆ ಬೀಳಲಿಲ್ಲ. ಬ್ರೇಕ್ ಚೆನ್ನಾಗಿತ್ತು. ಅಲ್ಲಿ ಚಕ್ರ ಬದಲಿಸ್ಲಿಕ್ಕೆ ಎರ್ಡುಗಂಟೆ ಬೇಕಾಯ್ತು. ಆ ಮೇಲೂ ನನ್ಗೆ ಉಡ್ಪಿಗೆ ಹೋಗ್ಬಿಡೋಣ ಅನ್ನಿಸ್ತಿತ್ತು. ಆದ್ರೆ ಈಗ ಪ್ರಾಣ ತೆಗೆದ್ಕೊಳ್ಳೋಣ ಎಂದು ನನ್ಗೆ ತೋರಿತು".

"ನಾನು ಮೊನ್ನೆ ಒಂದು ಸಿನಿಮಾಕ್ಕೆ ಹೋಗಿದ್ದೆ. ಅದರಲ್ಲಿದ್ದ ಒಬ್ಬ ನಟನನ್ನು ನೋಡಿ ನನಗೆ ಹೇಗೋ ನಿಮ್ಮ ನೆನಪಾಯಿತು. ಆ ಮೇಲೆ ನೀವು ಇಲ್ಲಿಗೆ ಬರುತ್ತೀರೆಂದು ನನಗೆ ಹೊಳೆಯಿತು. ನೀವು ಮಾತ್ರ ಪ್ರಾಣವನ್ನು ಕಳಕೊಳ್ಳುವುದಿಲ್ಲ."

"ಏನೋ ಇದು ಬಹಳ ವಿಚಿತ್ರ. ನಿಮ್ಗೇನೋ ಮಂತ್ರ ಶಕ್ತಿ ಇರ್ಬಹುದು"

"ಏನೂ ಇಲ್ಲ. ಆದರೆ ನನಗೆ ಯಾರಾದರೂ ಒಮ್ಮೆ ನೆನಪಾದರೆ ಅವರ ಸಂಪೂರ್ಣ ಚಿತ್ರ ನನ್ನ ಮುಂದೆ ನಿಲ್ಲುವುದು. ಅವರೊಡನೆ

ನಾನು ಮಾತಾಡುತ್ತಿದ್ದೇನೆಂದೇ ಭಾಸವಾಗುವುದು. ಹೀಗೆ ಹಿಂದೆ ಎಷ್ಟೋ ಸಲ ಆಗಿದೆ."

ನಾರಾಯಣ ಸ್ವಲ್ಪ ಹೊತ್ತು ಆಲೋಚಿಸಿದ. ಈ ಹೆಂಗಸಿಗೆ ಏನೋ ಒಂದು ರೀತಿಯ ದಿವ್ಯಶಕ್ತಿ ಇರಬೇಕೆಂದು ಅವನಿಗೆ ತೋರಿತು. ಇಲ್ಲವಾದರೆ ತಾನು ಒಂದಿಷ್ಟೂ ಪ್ರತಿಭಟನೆಯಿಲ್ಲದೆ ಏಕೆ ಅವಳನ್ನು ಹಿಂಬಾಲಿಸಿಕೊಂಡು ಬರಬೇಕಿತ್ತು? ಅವಳನ್ನು ಕಂಡ ಕೂಡಲೇ ತಾನೇಕೆ ಮಂತ್ರಮುಗ್ಧನಾದೆ? ರಸ್ತೆಯಲ್ಲಿ ಇವಳ ಮುಖ ಕೂಡಾ ಸರಿಯಾಗಿ ಗೋಚರಿಸುತ್ತಿದ್ದಿಲ್ಲ. ಇವಳ ಸೌಂದರ್ಯವಾಗಲೀ ಹಾವ ಭಾವಗಳಾಗಲೀ ಅಲ್ಲಿಯ ನೆರಳಿನಲ್ಲಿ ಕಾಣುತ್ತಿದ್ದಿಲ್ಲ. ತಾನು ಇವಳನ್ನು ಹಿಂಬಾಲಿಸುವಾಗ ಇವಳೊಡನೆ ದೈಹಿಕ ಸಂಸರ್ಗವನ್ನು ಪಡೆಯುವ ಆಶೆ ಪ್ರಬಲವಾಗಿರಲಿಲ್ಲ. ಇವಳೊಡನೆ ಬರುತ್ತಿದ್ದಾಗ ತನಗೆ ಸರಿಯಾಗಿ ಧೃತಿಯಾದರೂ ಇತ್ತೆಂದು ಹೇಳಲು ಬಾರದು. ದಾರಿಯಲ್ಲಿದ್ದ ಕಲ್ಲು ಮುಳ್ಳುಗಳ ಗಣನೆ ಕೂಡಾ ತನಗಾಗಲಿಲ್ಲ ಆಗ. ಇಲ್ಲಿ ಬಂದಮೇಲೆ ತನಗೆ ಇವಳ ಚಲುವಿನ ಅರಿವಾಯಿತು. ಇವಳ ಅಂಗ ಕಾಂತಿಯನ್ನೂ ರೂಪ ಲಾವಣ್ಯಗಳನ್ನೂ ತುಂಬಾ ಮೆಚ್ಚಿದೆ. ಇವಳೊಡನೆ ಕಲೆಯಬೇಕೆಂದು ಹಾತೊರೆದೆ. ಆದರೆ ಇವಳ ಮಾತುಗಳನ್ನು ಕೇಳಿದೊಡನೆ ತಾನೇಕೆ ಹೀಗೆ ಹುಂಭನಾಗಬೇಕು? ಇವಳು ತನಗೀಗ ಮನುಷ್ಯರಂತೆ ಕಾಣುವುದಿಲ್ಲ. ಇವಳನ್ನು ಮುಟ್ಟುವುದು ಬಿಟ್ಟು ಇವಳ ಬಳಿಯಲ್ಲಿರಲು ಕೂಡಾ ತಾನು ಅನರ್ಹನೆಂದು ತನಗೆ ತೋರುತ್ತಿದೆ! ಇವಳು ತನ್ನನ್ನು ಪರೀಕ್ಷಿಸಲೋಸುಗವೋ ಎಂಬಂತೆ ತನ್ನನ್ನು ಬದಿಯಲ್ಲಿ ಮಲಗಿಸಿ, ತನ್ನನ್ನು ಮುಟ್ಟದೆ ದೂರದಲ್ಲಿದ್ದಾಳೆ.

ಹೊರಗೆ ಮಳೆ ಬರುತ್ತಿತ್ತು. ಅದರ ಸದ್ದು ಕೋಣೆಯನ್ನಿಡೀ ತುಂಬಿತ್ತು. ಅದರ ಜೊತೆಗೆ ಕ್ರಿಮಿ ಕೀಟಗಳೂ ಕೂಗಾಡುತ್ತಿದ್ದವು. ಕೋಣೆಯೊಳಗೆ ಚಳಿಯಾಗುತ್ತಿತ್ತು. ನಾರಾಯಣ ಹೊದಿಕೆಯನ್ನು ತನ್ನ ಮೈಮೇಲೆ ಎಳೆದುಕೊಂಡ.

"ಏನು? ನಿಮಗೆ ಚಳಿಯಾಗುತ್ತದೆಯೇ?" ಎಂದು ಆಕೆ ಕೇಳಿದಳು.

" ಹೌದು " ಎಂದನವ.

ಮತ್ತೆ ತುಸು ಹೊತ್ತು ನಿಶ್ಶಬ್ದ. ಅವಳು ಯಾರೂ ಅವಳ ಹೆಸರೇನು ಎಂದು ಕೇಳಬೇಕೆಂದು ನಾರಾಯಣನಿಗನ್ನಿಸಿತು. ಆದರೆ ಫಕ್ಕನೆ ಧೈರ್ಯಬರಲಿಲ್ಲ. ಅವನಿಗೆ ತಾನು ಬೇರೆಲ್ಲಾದರೂ ಹೋಗಿ ಮಲಗಿದ್ದರೆ ಒಳ್ಳೆಯದೆಂದು ತೋರುತ್ತಿತ್ತು.

" ನಿಮ್ಮ ಹೆಸರೇನು ?" ಕೊನೆಗೆ ಅವನು ಕೇಳಿದ.

" ನನ್ನ ಹೆಸ್ರೇ?" ಆಕೆ ನಕ್ಕಳು. "ನನ್ನ ಹೆಸ್ರು ಲಕ್ಷ್ಮಿ ಯೆಂದು."

" ಲಕ್ಷ್ಮಿ ? ಓಹ್ ! ನೀವು ಶಿವರಾಯರ ತಂಗಿಯಲ್ಲವೇ ? ಈಗ ನನ್ಗೆ ನೆನಪಾಗ್ತಿದೆ. ಹೌದು ನಿಮ್ಮನ್ನು ಎಷ್ಟೋ ಸಲ ನಾ ಬಸ್ಸಿನಲ್ಲಿ ನಿಮ್ಮ ಮನೆಗೆ ಕರೆದುಕೊಂಡು ಹೋಗಿದ್ದೆ."

"ಹಾಂ. ಈಗಲಾದರೂ ನೆನಪಾಯಿತಲ್ಲ ?"

"ನೀವು ಇಲ್ಲೇನು ಮಾಡ್ತೀರಿ ?"

"ನನಗೆ ಇಲ್ಲಿಗೆ ಮದುವೆಯಾಗಿದೆ. ಇದು ನನ್ನ ಗಂಡನ ಮನೆ."

"ನಿಮ್ಗೆ ಗಂಡನೂ ಇದ್ದಾರೆಯೇ ?"

"ಹೌದು. ಅವ್ರು ಸರ್ಕಾರಿ ಕೆಲಸದವರು. ತಿರುಗಾಟಕ್ಕೆ ಈಗ ಹೋಗಿದ್ದಾರೆ. ನಾಳೆಯೋ ನಾಳದ್ದೋ ಅವರು ಬಂದಾರು."

ನಾರಾಯಣ ಇದನ್ನು ಕೇಳಿ ಸ್ತಂಭೀಭೂತನಾದ. ಗಂಡನಿದ್ದೂ, ಅವನ ಮನೆಗೆ ತನ್ನನ್ನು ಇವಳೇಕೆ ಕರೆದು ತಂದಿದ್ದಾಳೆ ಎಂದು ಅವನಿಗೆ ಕಳವಳವಾಯಿತು.

"ನಿಮಗೆ ನನ್ನ ವರ್ತನೆ ವಿಚಿತ್ರವಾಗಿ ಕಾಣಿಸುತ್ತದೆ ಅಲ್ಲವೆ ? ನಾನೇಕೆ ನಿಮ್ಮನ್ನು ಇಲ್ಲಿಗೆ ಕರೆದು ತಂದೆನೆಂದು ನಿಮಗೆ ಈಗ ತೋರುತ್ತದೆ."

"ನಿಜ. ನಾನು ನಾಲ್ಕೈದು ದಿನಗಳಿಂದ ತುಂಬಾ ಚಿಂತೆಯಲ್ಲಿದ್ದೇನೆ. ನನ್ನ ಮನಸ್ಸೇ ನನ್ನನ್ನು ಕೊರೆದು ತಿನ್ನುತ್ತಿದೆ. ಅದಕ್ಕಾಗಿ ಸ್ವಲ್ಪ ಸಂತೋಷಪಡೋಣವೆಂದು ನಿಮ್ಮೊಡ್ನೆ ಬಂದೆ."

"ನಿಮ್ಮ ಚಿಂತೆ ಯಾವುದೇ ಇರಲಿ. ಅದು ಇನ್ನು ನಾಲ್ಕು ದಿನಗಳೊಳಗೆ ಪರಿಹಾರವಾಗುತ್ತದೆ. ಇದು ಖಂಡಿತ."

"ಅಂದ್ರೆ ನಾ ಜೈಲಿಗೆ ಹೋಗ್ತೇನೋ? ನನ್ಗೆ ಫಾಶಿಯಾಗ್ತದೋ"

"ಏನೂ ಇಲ್ಲ. ನೀವು ಬಿಡುಗಡೆಯಾಗುತ್ತೀರಿ. ನಿಮ್ಮ ಮನಸ್ಸಿನಲ್ಲಿ ಒಂದು ತಪ್ಪು ಭಾವನೆ ನೆಲೆನಿಂತಿದೆ. ನಿಮಗೆ ಒಂದು ದೃಶ್ಯದ ವಿವರ ಮರೆತು ಹೋಗಿದೆ. ನೀವೇನೋ ದೊಡ್ಡ ಅಕೃತ್ಯವನ್ನು ಮಾಡಿದ್ದೀರೆಂದು ನೆನೆದಿದ್ದೀರಿ. ಅದನ್ನು ತಡೆಯಲಾರದೆ ಆತ್ಮಹತ್ಯೆ ಮಾಡಿಕೊಳ್ಳುವುದೆಂದು ಬಗೆದಿದ್ದೀರಿ. ಆದರೆ ಅದು ಅವಶ್ಯವಿಲ್ಲ."

"ಹಾಗಾದ್ರೆ ನಾನು ಅದನ್ನು ಮಾಡಿಲ್ವೆ ?"

"ಇಲ್ಲ. ಆದ್ರೆ ನಿಮ್ಗೆ ನೀವೇ ಮಾಡಿದ್ದೀರೆಂಬ ಸ್ಮೃತಿ ಭ್ರಮೆಯಾಗಿದೆ."

"ಏನೋ ನನ್ಗೆ ತಿಳಿಯದು. ನಾನೇ ಆ ಕೃತ್ಯವನ್ನು ಮಾಡಿದವನೆಂಬುದು ನನ್ಗೆ ಸ್ಪಷ್ಟವಾಗಿ ಗೊತ್ತಿದೆ."

" ಆ ತಿಳುವಳಿಕೆ ಸುಳ್ಳೆಂದು ನೀವೇ ಒಪ್ಪಿಕೊಳ್ಳುತ್ತೀರಿ ಮತ್ತೆ. ಅದಿರಲಿ. ನಾನು ನಿಮ್ಮನ್ನು ಏಕಾಗಿ ಕರೆದುಕೊಂಡು ಬಂದೆನೆಂದು ಹೇಳುತ್ತೇನೆ. ನನ್ನ ಜಾತಕದಲ್ಲಿ ಒಂದು ವ್ಯಭಿಚಾರ ಯೋಗವಿದೆ. ಅದನ್ನು ನನ್ನ ಗಂಡನೂ ತಿಳಿದಿದ್ದಾರೆ. ಆದರೆ ನಾನು ಅದನ್ನು ಈ ತನಕ ಮಾಡಿಲ್ಲ. ಹಾಗಾಗಿ ನಿಮ್ಮನ್ನು ನಾನು ಕರೆತಂದೆ."

"ಅದೊಂದನ್ನೂ ನನ್ನೊಡ್ನೆ ನೀವು ಹೇಳ್ಬೇಡಿ. ಹೆಂಗಸ್ರು ನನ್ಗೆ ಬೇಡ್ವೆಂದಿಲ್ಲ. ಆದ್ರೆ ನಿಮ್ಮ ಮೇಲೆ ನನ್ಗೆ ತುಂಬಾ ಅಭಿಮಾನ ಹುಟ್ಟಿದೆ. ನಿಮ್ಮನ್ನು ನಾನು ಮುಟ್ಟಿದ್ರೆ ಭಸ್ಮವಾಗಿ ಹೋದೇನೆಂದು ತೋರ್ತದೆ. ದಯವಿಟ್ಟು ಅದನ್ನು ನನ್ನೊಡ್ನೆ ಹೇಳ್ಬೇಡಿ."

"ನಾನು ಹೇಳೋದಿಲ್ಲ. ನಿಮ್ಮ ಸಂಶಯ ಪರಿಹಾರಕ್ಕಾಗಿ ಇಷ್ಟು ನುಡಿದೆ. ನಿಮ್ಮನ್ನೊಮ್ಮೆ ಮುಟ್ಟಬೇಕು. ಒಮ್ಮೆ ಅಪ್ಪಿಕೊಳ್ಳಬೇಕು ಎಂದಿಷ್ಟೇ ನನಗೆ ಮನಸ್ಸಿದೆ. ಆ ಯೋಗ ಹೇಗಾದರೂ ಪರಿಹಾರವಾಗಬೇಕಲ್ಲ ?"

"ನಿಮ್ಮಿಚ್ಛೆ ಬಂದಂತೆ ಮಾಡಿ. ಆದ್ರೆ ನನ್ನನ್ನು ಒಂದೂ ಕೇಳ್ಬೇಡಿ. ಇವೊತ್ತು ನನಗೊಂದೂ ತಿಳೀದು. ಮನಸ್ಸಿಗೆ ನೆಮ್ಮದಿ ಇಲ್ಲ."

ಲಕ್ಷ್ಮಿ ಮೆಲ್ಲಮೆಲ್ಲನೆ ಅವನ ಬಳಿಗೆ ಸರಿದಳು. ಅವನಿಗೆ ಅವಳ

ಬಿಸಿಯುಸಿರಿನ ಸ್ಪರ್ಶವಾಗುತ್ತಿತ್ತು. ಅವಳ ನಡುಗುತ್ತಿದ್ದ ಕೋಮಲವಾದ ತುಟಿಗಳು ಅವನ ಮೀಸೆಗೆ ತಾಗಿದುವು. ಅವಳ ಕೈ ಅವನ ಬೆನ್ನ ಹಿಂದೆ ಮೆಲ್ಲನೆ ಸರಿಯಿತು. ಅವಳ ಗಡುಸಾದ ಎದೆ ಅವನ ಎದೆಯನ್ನು ಸೋಂಕಿತು. ಅವನು ಅಂಜಿಕೆಯಿಂದ ನಡುಗುತ್ತಿದ್ದ.

ಹೀಗೆಯೇ ಇರುವಾಗ ಅವನನ್ನು ನಿದ್ದೆ ಆವರಿಸಿತು. ಆ ರಾತ್ರಿ ಒಂದು ಕನಸು ಕೂಡಾ ಅವನಿಗೆ ಬೀಳಲಿಲ್ಲ. ಮಧ್ಯ ರಾತ್ರಿಯಲ್ಲೊಮ್ಮೆ ಅವನಿಗೆ ಎಚ್ಚರವಾಯಿತು. ಲಕ್ಷ್ಮಿ ಅವನ ಮೇಲೆ ಒಂದು ಕೈಯ್ಯನ್ನಿಟ್ಟುಕೊಂಡೇ ನಿದ್ರಿಸಿದ್ದಳು. ಅವನ ಮೈ ಅವಳ ದೇಹದ ಶಾಖತಾಗಿ ಬೆವರಿನಿಂದ ಒದ್ದೆಯಾಗಿತ್ತು.

ಐದು ಗಂಟೆಯಾಗುವಾಗ ಅವನಿಗೆ ಎಂದಿನಂತೆ ಎಚ್ಚರವಾಯಿತು. ಅವನು ಅವಳ ಕೈಯ್ಯನ್ನು ಮೆಲ್ಲನೆ ದೂಡಿ ಎದ್ದು ಕುಳಿತ. ಅವಳು ಆಗ ಎದ್ದಳು.

"ಏನು, ನಿಮಗೆ ಹೋಗುವ ಸಮಯವಾಯಿತೆ?" ಎಂದು ಅವಳು ಕೇಳಿದಳು.

"ಹೌದು" ಎಂದನವ ಅಂಗಿ ಇಜಾರಗಳನ್ನೆಲ್ಲಾ ಸರಿಪಡಿಸುತ್ತ.

"ಆಯಿತು, ಹೋಗಿ. ನೀವೇನೂ ಹೆದರಬೇಡಿ" ಎಂದಳವಳು ದೀಪವನ್ನು ಉರಿಸಿ.

ಅವನು ಅವಳನ್ನೇ ಕ್ಷಣಕಾಲ ನೋಡಿದ. ಅವಳು ಅವನ ಹಣೆಗೆ ಒಂದು ಮುತ್ತನ್ನಿಟ್ಟಳು.

## ೧೦

ನಾರಾಯಣನಿಗೆ ಉಡುಪಿಯಿಂದ ಬಸ್ಸಿನಲ್ಲಿ ಹೊರಡುವಾಗ ಮನಸ್ಸು ತುಂಬಾ ತಿಳಿಯಾಗಿತ್ತು. ಹಿಂದಿನ ರಾತ್ರೆಯಲ್ಲಿ ನಡೆದ ಘಟನೆಗಳು ಕೇವಲ ಸ್ವಪ್ನ ಸದೃಶವಾದ್ದೆಂದು ಅವನು ಭಾವಿಸಿದ್ದ. ಅಂದು ಅವನು ಜಾಗ್ರತೆಯಾಗಿ ಬಸ್ಸನ್ನು ನಡೆಸುತ್ತಿದ್ದ. ತಾನು ಬಸ್ಸನ್ನು ನಡೆಸಲು ಪುನಃ ಕಲಿತೆನೋ ಎಂದೂ ಅವನಿಗೆ ಒಮ್ಮೆ ತೋರದಿರಲಿಲ್ಲ.

ಅಂದು ಆ ಕೆಲಸ ಅವನಿಗೆ ಅಷ್ಟು ಸುಲಭವಾಗಿ, ಅಷ್ಟು ಉತ್ಸಾಹದಾಯಕವಾಗಿ ತೋರುತ್ತಿತ್ತು.

ಬಸ್ಸು ಸ್ವಲ್ಪ ಮುಂದೆ ಬರುವಾಗ ಇಬ್ಬರು ಹೆಂಗಸರು ಅದನ್ನು ಏರಿದರು. ಹೆಂಗಸರ ಜಾಗೆ ಖಾಲಿಯಿದ್ದುದರಿಂದ ಅವರು ನಾರಾಯಣನ ಹಿಂದುಗಡೆಯೇ ಕುಳಿತುಕೊಂಡರು. ಅವರ ತಲೆಯಲ್ಲಿದ್ದ ಮಲ್ಲಿಗೆಹೂವಿನ ವಾಸನೆ ನಾರಾಯಣನ ಮೂಗಿಗೆ ಒಂದೇ ಸಮನೆ ಬಡಿಯುತ್ತಿತ್ತು. ಅವರೊಡನೆ ಅವರು ಮುಖಕ್ಕೆ ಹಚ್ಚಿದ್ದ ಸೌಂದರ್ಯವರ್ಧಕ ಪೌಡರು ಮತ್ತು ಕ್ರೀಮುಗಳ ಸುವಾಸನೆಯೂ ಬರುತ್ತಿತ್ತು. ಒಬ್ಬಳು ಉಸಿರು ಬಿಡುತ್ತಿರುವುದು ನಾರಾಯಣನ ಕುತ್ತಿಗೆಯ ಹಿಂಬದಿಗೆ ತಾಗುತ್ತಿತ್ತು. ಅವಳ ಕೈಗಳ ಬಳೆ ಝಣಿ ಝಣಿಲೆನ್ನುವಾಗ ಅವನು ಬೆಚ್ಚಿ ಬೀಳುತ್ತಿದ್ದ. ಮತ್ತೊಬ್ಬಳ ಕೈಬೆರಳುಗಳು ಸೀರೆಯ ಸೆರಗನ್ನು ಸರಿಪಡಿಸುವಾಗ ಅವನ ಕಿವಿಯನ್ನು ಸೋಂಕಿದುವು. ಅವನಿಗಾಗ ಮೈ ಝುಮ್ಮೆಂದಿತು. ಅವನಿಗೆ ತಿಳಿಯದಂತೆಯೇ ಬಸ್ಸಿನ ವೇಗ ಹೆಚ್ಚುತ್ತಿತ್ತು. ಅವನು ಕುಶಲತೆಯಿಂದ ಸ್ಟೀಯರಿಂಗ್ ಚಕ್ರವನ್ನು ತಿರುಗಿಸುತ್ತಿದ್ದ. ಆಗಾಗ ಕರ್ಕಶ ಶಬ್ದದ ವಿದ್ಯುಚ್ಛಕ್ತಿಯ ಹಾರ್ನನ್ನೂ ಬಾರಿಸುತ್ತಿದ್ದ. ವೇಗವನ್ನು ತೋರಿಸುವ ಮೀಟರಿನಲ್ಲಿ ಮುಳ್ಳು ಮೇಲಕ್ಕೇರುತ್ತಿತ್ತು. ಆದರೂ ಅದರ ಸಂಪೂರ್ಣ ಹತೋಟಿ ಅವನ ಕೈಯ್ಯಲ್ಲಿತ್ತು. ರಸ್ತೆಯಲ್ಲಿ ಸಣ್ಣ ಕಲ್ಲುಗಳಿದ್ದರೂ ಅವನು ತಪ್ಪಿಸಿ ಅವನು ಬಸ್ಸನ್ನೋಡಿಸುತ್ತಿದ್ದ.

ಕಂಡಕ್ಟರ ಜುವಾನ ಹಿಂದಿನಿಂದ ಆ ಹೆಂಗಸರಿಗೆ ಎಲ್ಲಿಗೆ ಹೋಗಬೇಕೆಂದು ಕೇಳುತ್ತಿದ್ದ. ಆದರೆ ಅವರಿಗೆ ಅದರ ಗೊಡವೆಯೂಗಲಿಲ್ಲ.

ಒಂದೆಡೆ ಒಬ್ಬ ಮುದುಕಿ ಬಸ್ಸನ್ನು ನಿಲ್ಲಿಸಲು ಕೈಹಿಡಿದಳು. ನಾರಾಯಣ ಫಕ್ಕನೆ ನಿಲ್ಲಿಸಿದ. ಅವನ ಹಿಂದೆ ಇದ್ದ ಹೆಂಗಸಿನ ಹಣೆ ಅವನ ಕುತ್ತಿಗೆಗೆ ಆಗ ತಾಕಿತು. ಅವನು ಅವಳನ್ನು ನೋಡಿ ನಕ್ಕ.

ಮುದುಕಿ ಕುಳಿತುಕೊಂಡೊಡನೆ ಬಸ್ಸು ಮುಂದರಿಯಿತು. ಕಂಡಕ್ಟರ ಮುದುಕಿಗೂ ಟಿಕೇಟು ಕೊಟ್ಟ. ಆಕೆ ಒಂದು ರೂಪಾಯಿಯನ್ನು ಕೊಟ್ಟಳು.

"ಇನ್ನೂ ಎಂಟೂವರಾಣೆ ಆಗ್ಬೇಕು ಅಜ್ಜಿ "ಎಂದು ಜುವಾನ ಹೇಳಿದ.

"ನನ್ನೊಡ್ನೆ ಇಲ್ಲ' ಮಗೂ. ಯಾವಾಗ್ಲೂ ನಾನದು ಅಷ್ಟೇ ಕೊಡೋದು."

"ಅದಾಗ್ಲಿಲ್ಲ" ಜುವಾನ ನಿರ್ದಾಕ್ಷಿಣ್ಯವಾಗಿ ತುಸು ಒರಟು ಧ್ವನಿಯಲ್ಲಿ ಹೇಳಿದ. "ಇನ್ನು ಎಂಟೂವರಾಣೆ ಕೊಡ್ಬಿದ್ರೆ ಈಗ ಬಸ್ಸಿನಲ್ಲಿ ಕೂತದ್ದಕ್ಕೆ ಎಡ್ರಾಣೆ ಕೊಟ್ಟು ಇಳಿಯಿರಿ. ಈ ಬಸ್ಸಿನಲ್ಲಿ ಹೆಚ್ಚು ಕಡಿಮೆ ಆಗೋದಿಲ್ಲ."

"ನನ್ಗೆ ಹೋಗ್ದೆ ಉಪಾಯವಿಲ್ಲ ಮಗೂ," ಆ ಮುದುಕಿ ದೈನ್ಯದಿಂದ ಹೇಳಿತು. "ಹೇಗಾದ್ರೂ ಕೊಂಡ್ಹೋಗಿ. ನಿನ್ಗೆ ತುಂಬಾ ಪುಣ್ಯ ಬಂದೀತು. ನನ್ನೊಡ್ನೆ ಬೇರೆ ಹಣವಿಲ್ಲ."

"ಅದಾಗ್ದು. ನೀವು ಹಾಗೆಲ್ಲ ಹೇಳಿದ್ರೆ ನಮ್ಮ ಕಂಪ್ನಿಯವ್ರು ಕೇಳೋಕಿಲ್ಲ. ನಿಮ್ಗೆ ಮೊದ್ಲೇ ಹೇಳ್ಬಹುದಿತ್ತಲ್ಲ, ಹಣವಿಲ್ಲ ಎಂದು? ಆಗ ಇಷ್ಟೆಲ್ಲ ಫಜೀತಿ ಆಗ್ತಿದ್ದಿಲ್ಲ."

ನಾರಾಯಣ ವೇಗವನ್ನು ಕಡಿಮೆಮಾಡಿದ. ಅವನಿಗೆ ಬದಿಯಲ್ಲಿದ್ದ ಕನ್ನಡಿಯಲ್ಲಿ ಮುದುಕಿಯ ಮುಖ ಕಾಣುತ್ತಿತ್ತು. ಅವಳು ನಿರ್ಗತಿಕ ಹೆಂಗಸೆಂಬುದು ಅವನಿಗೆ ಖಚಿತವಾಯಿತು. ಅವಳ ವಸ್ತ್ರಗಳೆಲ್ಲ ಹರಿದಿದ್ದುವು. ಬಾಯಿಯಲ್ಲಿ ಹಲ್ಲುಗಳಿರಲಿಲ್ಲ. ಕಿವಿಯಲ್ಲಾಗಲೀ ಕುತ್ತಿಗೆಯಲ್ಲಾಗಲೀ ಒಡವೆಗಳೂ ಇರಲಿಲ್ಲ. ಕಣ್ಣುಗಳು ಗುಳಿಬಿದ್ದಿದ್ದುವು. ನಾರಾಯಣನಿಗೆ ಅವಳನ್ನು ಕಂಡು ಮರುಕಬಂತು. ಬಹುಶಃ ತನ್ನ ತಾಯಿಯೂ ಈಗ ಹೀಗೆಯೇ ಇರಬಹುದೆಂದು ಅವನಿಗೆ ತೋರಿತು.

"ಏ ಜುವಾಂ," ಅವನು ಕಂಡಕ್ಟರನನ್ನು ಕರೆದ. "ಎಷ್ಟು ಹಣ ಕಡಿಮೆಯಾಗಿದೆ?"

"ಎಂಟೂವರಾಣೆ."

"ಏನಾದ್ರೂ ಮಾಡ್ಲಿಕ್ಕಾಗ್ದೇ?"

"ಈಗ ಚಕ್ಕಿಂಗ್‌ನವ್ರು ಬಂದಾರು. ಅದೆಲ್ಲ ಕಷ್ಟ."

"ಆಗ್ಲಿ ಹೋದಷ್ಟು ಹೋಗೋಣ. ಪಾಪ. ಮುದ್ಕಿಯಲ್ವೇ ? ಹಾಗೆ ಒಂದು ವೇಳೆ ಹೆಚ್ಚು ಹಣ ಕೊಡ್ಬೇಕೇ ಎಂದಾದ್ರೆ ನಾಕೊಡ್ತೇನೆ"

"ನೋಡೋದು ಬೇಡ. ಈಗ್ಲೇ ಬರೆದ್ಬಿಡ್ತೇನೆ. ಈ ಚಕ್ಕಿಂಗ್ ನವ್ರ ಉಪಟಳ ತಡೆಯಲಿಕ್ಕಾಗೋದಿಲ್ಲ. ಒಂದಿಷ್ಟು ಹೆಚ್ಕಡ್ಮೆಯಾದ್ರೆ ರಿಪೋರ್ಟ್ ಮಾಡ್ಬಿಡ್ತಾರೆ. ಕಂಪ್ನಿಯವ್ರು ಮತ್ತೆ ನಮ್ಮನ್ನು ಕೆಲ್ಸ ದಿಂದ್ಲೇ ತೆಗೆದ್ಹಾಕಿ ಬಿಡ್ತಾರೆ."

"ಆಯ್ತಪ್ಪ ಇಗೋ ನಾಕೊಡ್ತೇನೆ" ಎಂದು ನಾರಾಯಣ ಜೇಬಿ ನಿಂದ ಒಂದು ರೂಪಾಯಿಯ ನೋಟನ್ನಿತ್ತ.

ಎಲ್ಲರೂ ಆಗ ಚಕಿತರಾದರು. ಮುದುಕಿಯ ಕಣ್ಣಿನಲ್ಲಿ ನೀರು ಬಂದಿತ್ತು. ಜುವಾನ ಮರುಮಾತಾಡದೆ ಸಂಕೋಚದಿಂದ ಆ ಹಣ ವನ್ನು ತೆಗೆದುಕೊಂಡ.

"ಚಿಲ್ರೆ ಮತ್ತೆ ಕೊಟ್ರೆ ಸಾಕು" ಎಂದು ನಾರಾಯಣ ಮತ್ತೆ ಹೇಳಿದ.

"ಏನ್ರೀ ಡ್ರೈವರ್, ಈಗ ಕಂಪೆನಿಯವರು ಇಷ್ಟು ಸ್ಟ್ರಿಕ್ಟ್ ಆಗಿದ್ದಾರೆಯೆ ?" ಎಂದು ಅವನ ಬಳಿಯಲ್ಲಿ ಕುಳಿತುಕೊಂಡಿದ್ದವರೊ ಬ್ಬರು ಕೇಳಿದರು.

"ಕಂಪ್ನಿಯೋರು ಯಾರಿಗೂ ಈಗ ಹೆದ್ರೋದಿಲ್ಲ ಸ್ವಾಮಿ. ಈಗ ಒಂದೇಸವ್ನೆ ಅವ್ರು ಹಣ ಮಾಡೋದ್ರಲ್ಲಿದ್ದಾರೆ."

"ಆದ್ರೆ ಕಂಡಕ್ಟರರೂ ಡ್ರೈವರುಗಳೂ ಹಣ ಮಾಡಿದ್ದಾರೆ."

"ಏನು ಸ್ವಾಮಿ ಹಣ? ಇದ್ರಲ್ಲಿ ಕೆಲ್ಸ ಮಾಡುವಾಗ ಒಂದೇಸವ್ನೆ ಗಂಟಲು ಒಣಗ್ತದೆ. ಆಗಾಗ ಕಾಫಿ ಕುಡಿಯ್ದೆ ಆಗೋದಿಲ್ಲ. ದಿನಕ್ಕೆ ನಾಲ್ಕುಬಾರಿ ಕಾಫಿಯೆಂದ್ರೂ ಒಂದ್ರೂಪಾಯಿ ಆಯ್ತು. ಊಟವೂ ಹೆಚ್ಚಾಗಿ ಹೊರಗೇ ಆಗ್ಬೇಕು. ಮತ್ತೆ ಡ್ರೆಸ್. ಇಷ್ಟೆಲ್ಲ ಆಗ್ವಾಗ ಎಷ್ಟು ಹಣ ಸಿಕ್ಕಿದ್ರೂ ಉಳೀಲಿಕ್ಕಿಲ್ಲ. ಹಿಂದೆ ಪ್ಯಾಸೆಂಜರರು ನಮ್ಗೆ ಏನಾದ್ರೂ ಕಾಫಿಯಾದ್ರೂ ಕೊಡ್ತಿದ್ರು. ಆದ್ರೆ ಈಗ ಅವ್ರೂ ನಮ್ಮ ವೈರಿಗಳಾಗಿದ್ದಾರೆ."

ನಾರಾಯಣ ಮತ್ತೆ ಮಾತಾಡಲಿಲ್ಲ. ಅವನ ದೃಷ್ಟಿ ಮೇಲಿದ್ದ ಕನ್ನಡಿಯ ಮೇಲೆ ಹರಿಯುತ್ತಿತ್ತು. ಅದರಲ್ಲಿ ಅವನ ಹಿಂದುಗಡೆ ಕುಳಿತಿದ್ದ ಒಬ್ಬಳು ಚೆನ್ನಾಗಿ ಕಾಣುತ್ತಿದ್ದಳು. ಅವಳ ಕೋಮಲವಾದ ತುಟಿಗಳನ್ನು ನೋಡಿದಷ್ಟೂ ಅವನಿಗೆ ಸಾಕಾಗಲಿಲ್ಲ. ಕುತ್ತಿಗೆಯ ಮೇಲೆ ಮುತ್ತಿನ ಸರ ನಲಿಯುತ್ತಿತ್ತು. ಅದರ ಕೆಳಭಾಗ ಅವಳ ಎದೆಯ ಮೇಲೆ ನೇತಾಡುತ್ತಿತ್ತು. ಬಸ್ಸಿನ ವೇಗಕ್ಕೆ ಬರುತ್ತಿದ್ದ ಗಾಳಿ ಅವಳ ಸೆರಗನ್ನು ಮೇಲೆ ಹಾರಿಸುತ್ತಿತ್ತು. ಆಗ ಅವನಿಗೆ ಅವಳ ನೀಲಿ ಬಣ್ಣದ ರೇಶ್ಮೆಯ ಕುಪ್ಪಸ ಕಾಣುವುದು. ಬದಿಗಳಲ್ಲಿ ಅವಳ ಮೊಲೆಗಳ ಮಾಂಸಯುಕ್ತವಾದ ಬುಡಗಳು ಕಾಣುವವು. ಅವು ಕುಪ್ಪಸದೊಳಗೆ ಚೂಪಾಗಿ ನಿಂತಿದ್ದುವು. ಅವಳು ಏನಾದರೂ ಕೆಮ್ಮುವಾಗ ಇಲ್ಲವೇ ದೀರ್ಘಶ್ವಾಸ ಬಿಡುವಾಗ ಅವಳ ಎದೆ ಅಗಲವಾಗುವುದು. ಮುತ್ತಿನ ಸರ ಅದರ ಮೇಲೆ ಕುಪ್ಪಳಿಸುವುದು. ಕುಪ್ಪಸ ಅಲುಗಾಡುವುದು. ಆಗ ಅವಳ ಕುತ್ತಿಗೆಯ ಕೆಳಬದಿಯಲ್ಲಿದ್ದ ಚಿಕ್ಕ ಮಚ್ಚೆ ಅವನಿಗೆ ಕಾಣಿಸುವುದು. ಅವನು ಮತ್ತೂ ಅದನ್ನೇ ನೋಡುವ. ಅವಳು ಎದುರು ನೋಡುತ್ತಿರುವಳು. ಅವಳಿಗೆ ಅವನು ತನ್ನನ್ನು ಹೀಗೆ ಕನ್ನಡಿಯಲ್ಲಿ ನೋಡುತ್ತಾನೆಂಬ ಅರಿವಾಗುವುದಿಲ್ಲ. ಅವನು ಬೇರೆ ಬೇರೆ ದಿಕ್ಕುಗಳಿಂದ ಅವಳ ಕಿವಿಗಳನ್ನು ಅವಳ ನೀಳವಾದ ಮೂಗನ್ನು ಎಲ್ಲ ನೋಡುತ್ತಿದ್ದ.

ಕಾರ್ಕಳದಲ್ಲಿ ಬಸ್ಸು ನಿಂತಿತು. ಕೆಲವರು ಅದರಿಂದಿಳಿದು ಕಾಫಿ ಕುಡಿದರು. ನಾರಾಯಣನೂ ಹೋಟೇಲಿಗೆ ಹೋಗಿ ಒಂದಿಷ್ಟು ಚಹ ಕುಡಿದು ಒಂದು ಸಿಗರೇಟನ್ನು ಸೇದುತ್ತ ಬಸ್ಸಿನ ಬಳಿಗೆ ಬಂದ. ಅದರ ಚಕ್ರಗಳಲ್ಲಿ ತುಂಬಾ ಕೆಸರಾಗಿತ್ತು. ಅದರ ಮುಂದೆ ಕುಳಿತುಕೊಂಡು ಅದರ ಕೆಲವು ಭಾಗಗಳನ್ನು ಮುಟ್ಟಿ ನೋಡಿದ. ಕೆಲವನ್ನು ಕೈಯ್ಯಲ್ಲಿ ಅಲುಗಾಡಿಸಿದ. ಜುವಾನ ಒಂದು ಬಾಲ್ದಿ ನೀರನ್ನು ತಂದು ರೇಡಿಯೇಟರಿನೊಳಗೆ ಹೊಯ್ದ.

ಪುನಃ ಬಸ್ಸಿನಲ್ಲಿ ಎಲ್ಲರೂ ಕುಳಿತರು. ಜುವಾನ ಜನರನ್ನು ಲೆಕ್ಕಮಾಡತೊಡಗಿದ.

ನಾರಾಯಣ ಹಾರ್ನು ಹೊಡೆದ.

"ಒಂದು ಜನ ಕಡಿಮೆಯಾಗಿದೆ ಅಣ್ಣಾ" ಎಂದು ಜುವಾನ ಹೇಳಿದ.

"ವಾಟ್, ನೋ ಪ್ಯಾಸೆಂಜರ್ ?" ಎಂದು ನಾರಾಯಣ ನಗುತ್ತ ಕೇಳಿದ.

ಅವನ ಇಂಗ್ಲೀಷ್ ಮಾತನ್ನು ಕೇಳಿ ಎಲ್ಲರಿಗೂ ನಗು ಬಂದಿತು. ಅವನ ಹಿಂದೆ ಇದ್ದ ಹೆಂಗಸರಂತೂ ಬಿದ್ದು ಬಿದ್ದು ನಕ್ಕರು ನಾರಾಯಣನೂ ಹಲ್ಲು ಕಿರಿದ.

"ಈ ಬಸ್ಸು ಮೂಡ್ಬಿದ್ರಿಗೆ ಎಷ್ಟು ಹೊತ್ತಿಗೆ ಮುಟ್ಟುತ್ತದಪ್ಪಾ ?" ಎಂದು ಮುದುಕಿ ಕೇಳಿದಳು.

"ಇನ್ನು ಅರ್ಧ ಗಂಟೇಲಿ. ನಿಮ್ಗೆ ಮೂಡ್ಬಿದ್ರಿ ಊರೇ ?" ಎಂದು ನಾರಾಯಣ ಅವಳೊಡನೆ ಕೇಳಿದ.

"ಹೌದು ಮಗ. ಅಲ್ಲಿ ನನ್ಮಗ್ನಿಗೆ ಖಸ್ತು ಕ್ಯಾಲೆ ಎಂದು ಕಾಗ್ದಾ ಬಂದಿದೆ. ಹಾಗೆ ನಾಹೊರ್ಟೆ. ನೀ ಕೊಟ್ಟ ಹಣವನ್ನ ನಾಳೆ ವಾಪ್ಸು ಕೊಡ್ತೇನೆ. ಇದೇ ಬಸ್ಸಿನಲ್ಲಿ ಬರ್ತೀಯಲ್ಲ ?"

"ಬಂದ್ರೆ ಬಂದೆ ಇಲ್ದಿದ್ರೆ ಇಲ್ಲ", ನಾರಾಯಣ ಒಣ ಧ್ವನಿಯಲ್ಲಿ ಹೇಳಿದ. "ನೀವೇನೂ ಅದ್ಕಾಗಿ ಗಾಬ್ರಿ ಪಡೋದು ಬೇಡ. ನನ್ಗೂ ನಿಮ್ಹಾಗಿನ ಒಬ್ಬಳು ತಾಯಿಯಿದ್ದಾಳೆ. ಹಣಕ್ಕಾಗಿ ನಾವು ಹುಟ್ಟಿದ್ದೋರೆ ?"

"ದೇವ್ರು ನಿನ್ಗೆ ಒಳ್ಳೇದುಮಾಡ್ಲಿ ಮಗೂ" ಎಂದು ಮುದುಕಿ ಕೈಗಳನ್ನು ಮೇಲಕ್ಕೆತ್ತಿತು.

ಜುವಾನ ಮತ್ತೆ "ರೈಟ್" ಎಂದ. ಬಸ್ಸು ಓಡತೊಡಗಿತು. ನಾರಾಯಣನ ಮನಸ್ಸು ಬಹಳ ಹಗುರವಾಗಿತ್ತು, ತನ್ನ ಧರ್ಮಬುದ್ಧಿಯನ್ನು ಈ ಸುಂದರಿಯರ ಮುಂದೆ ಮೆರೆಸಿ ಅವರ ಮೆಚ್ಚುಗೆಯನ್ನು ಸಂಪಾದಿಸಿದೆನೆಂದು ಅವನು ಬಹಳ ಹಿಗ್ಗಿ ಹೋಗಿದ್ದ.

ಬಸ್ಸು ಮುಂದೆ ಹೋಗುವಾಗ ಪ್ರಯಾಣಿಕರು ಹೊರಗೆ ಕೈ ತೋರಿಸಿ "ಗೋಮಟೇಶ್ವರ, ಗೋಮಟೇಶ್ವರ, ಅಕೊಳ್ಳಿ ನೋಡಿ

ಅಲ್ಲಿ" ಎಂದು ಒಬ್ಬರಿಗೊಬ್ಬರು ಹೇಳುತ್ತಿದ್ದರು. ನಾರಾಯಣ ಬಸ್ಸಿನ ವೇಗವನ್ನು ತುಸು ಕಡಿಮೆಮಾಡಿ ಆ ಇಬ್ಬರು ಹೆಂಗಸರಿಗೆ ಕಲ್ಲಿನ ಬೆಟ್ಟದ ಮೇಲೆ ನಿಂತಿದ್ದ ಗೋಮಟೇಶ್ವರನ ಕರಿ ಕಲ್ಲಿನ ಪ್ರತಿಮೆಯನ್ನು ತೋರಿಸಿದ.

"ಇದಕ್ಕೇನೆ ಕಾರ್ಕಳದ ಗೊಮ್ಮಟನೆಂದು ಹೇಳುವುದು ? ಎಷ್ಟು ದೊಡ್ಡ ಪ್ರತಿಮೆ !" ಎಂದು ಗೋದಿ ಸರವನ್ನು ಹಾಕಿಕೊಂಡವಳು ಆಶ್ಚರ್ಯದಿಂದ ಮೂಗಿನ ತುದಿಯಲ್ಲಿ : ಬೆರಳನ್ನಿಟ್ಟಳು.

"ಅದ್ರ ಬುಡ್ದಲ್ಲಿ ನಿಂತ್ರೆ ನಮ್ಗೆ ಅದ್ರತಲೆ ಕಾಣೋದಿಲ್ಲ. ಇಲ್ಲಿಗೆ ಅದು ಚಿಕ್ಕದಾಗಿ ಕಾಣಿಸ್ತದೆ ಅಷ್ಟೆ. ಇಲ್ಲಿಂದ ಅಲ್ಲಿಗೆ ಹೋಗ್ಬೇಕಾದ್ರೆ ಮಾತ್ರ ಸುಮಾರು ನಾಲ್ಕು ಮೈಲು ದೂರವಿದೆ" ಎಂದು ನಾರಾಯಣ ಅವರಿಗೆ ವಿವರಿಸಿದ.

"ಒಹ್ಹೋ ! ಅಷ್ಟು ದೊಡ್ಡ ಮೂರ್ತಿಯೂ ಒಂದೇ ಕಲ್ಲಿನಿಂದ ಮಾಡಲ್ಪಟ್ಟುದಲ್ಲವೆ ?" ಎಂದು ಮತ್ತೊಬ್ಬಳು ಕೇಳಿದಳು.

"ಇಡೀ ಕಲ್ಲಿನಲ್ಲಿ ಕೆತ್ತಿ ಮತ್ತೆ ನಿಲ್ಲಿಸಿದ್ದು" ಎಂದು ನಾರಾಯಣ ನುಡಿದ.

ಜನರು ನೋಡುತ್ತಿದ್ದಂತೆಯೇ ಆ ಪ್ರತಿಮೆ ಅದೃಶ್ಯವಾಗುತ್ತಾ ಬಂತು. ಬಸ್ಸಿನ ವೇಗ ಹೆಚ್ಚುತ್ತಿತ್ತು.

"ಮಂಗಳೂರಿನಿಂದ ಕಾಸರಗೋಡಿಗೆ ಸಂಜೆಗೆ ಎಷ್ಟು ಗಂಟೆಗೆ ರೈಲು ಇದೆ?" ಎಂದು ಒಬ್ಬಳು ನಾರಾಯಣನೊಡನೆ ಸ್ವಲ್ಪ ಹೊತ್ತಾದ ಬಳಿಕ ಕೇಳಿದಳು.

"ಆರು ಗಂಟೆಗೆ ಒಂದಿದೆ", ಅವನೆಂದ. "ನಿಮ್ಗೆ ಕಾಸ್ರಗೋಡಿಗೆ ಹೋಗಬೇಕೆ ?"

"ಹೌದು," ಅವಳೆಂದಳು. "ಮಂಗಳೂರಲ್ಲಿ ನಮಗೆ ಸ್ವಲ್ಪ ಕೆಲಸವಿದೆ. ಈ ಬಸ್ಸು ಬೇಗನೆ ತಲುಪಿದರೆ ಆರು ಗಂಟೆಯ ಒಳಗೆ ರೈಲನ್ನು ಹಿಡಿಯಬಹುದು".

"ಬಸ್ಸು ಸಮಯಕ್ಕೆ ಸರಿಯಾಗಿ ಹೋಗ್ತದೆ. ಈಗ ಒಂಭತ್ತಾಯಿತು. ಹತ್ತೂ ಕಾಲರೊಳ್ಗೆ ನಾವು ಮಂಗ್ಳೂರಲ್ಲಿದ್ದೇವೆ".

ನಾರಾಯಣ ಹಿಂದಿನಿಂದ ಒಂದು ಹಾರ್ನನ್ನು ಕೇಳಿ ಕನ್ನಡಿಯು ನ್ನೊಮ್ಮೆ ನೋಡಿದ. ಆಗ ಅದರಲ್ಲಿ ಗೋದಿಸರ ಹಾಕಿಕೊಂಡಿದ್ದವಳು ಕಾಣುತ್ತಿದ್ದಳು. ಅವಳ ಮುಖ ಅಗಲವಾಗಿತ್ತು. ತುಟಿಗಳು ಉದ್ದ ವಾಗಿದ್ದುವು. ಕಣ್ಣುಗಳಲ್ಲಿ ಭಾವಪರವಶತೆಯ ತೀಕ್ಷ್ಣತೆಯಿತ್ತು. ಅವಳ ಮುಂಗುರುಳುಗಳು ಗಾಳಿಯಲ್ಲಿ ಹಾರಾಡುತ್ತಿದ್ದುವು. ಹಣೆಯ ಮೇಲೆ ಪೌಡರಿನ ಛಾಯೆ ಇನ್ನೂ ಇತ್ತು. ಅವಳ ಗಲ್ಲ ದಪ್ಪವಾಗಿ ದುಂಡಾಗಿತ್ತು. ಕಿವಿಗಳಲ್ಲಿ ತೊಟ್ಟಿಲು ಲೋಲಾಕುಗಳು ನೇತಾಡು ತ್ತಿದ್ದುವು. ಮೂಗಿನಲ್ಲಿ ಹೊಳೆಯುವ ವಜ್ರದ ಮೂಗುತಿಯಿತ್ತು. ನಾರಾಯಣನಿಗೆ ಅವಳ ಸೌಂದರ್ಯ ಅಷ್ಟೊಂದು ಚೆನ್ನಾಗಿ ಹಿಡಿಸಲಿಲ್ಲ.

ಮೂಡಬಿದ್ರೆಯಲ್ಲಿ ಅವನು ಕಾಫಿ ಕುಡಿದು ತಃಸು ತಿಂಡಿಯನ್ನು ತಿಂದ. ಆದರೆ ಅವನಿಗೆ ಜೋರಾಗಿ ಹಸಿವಾಗುತ್ತಿತ್ತು.

ಮಂಗಳೂರಿಗೆ ಹತ್ತಿರವಾದಂತೆ ಅವನಿಗೆ ಮಾವನ ನೆನ ಪಾಯಿತು. ಹಿಂದಿನ ರಾತ್ರೆ ಉಡುಪಿಯಲ್ಲಿ ಲಕ್ಷ್ಮಿಯು ಹೇಳಿದ ಭವಿ ಷ್ಯವೂ ಜ್ಞಾಪಕಕ್ಕೆ ಬಂತು. ಅವಳು ಸದ್ಯ ತನ್ನ ಜೀವವನ್ನುಳಿಸಿದಳಲ್ಲ ಎಂದು ಅವನು ಅಂದುಕೊಂಡ.

ಅವಳು ತನ್ನನ್ನು ಕರೆದುಕೊಂಡು ಹೋಗಿಯೂ ತನ್ನಿಂದ ಏನೂ ಪ್ರಯೋಜನವನ್ನು ಪಡೆಯಲಿಲ್ಲ. ಅವಳ ಸೌಂದರ್ಯಕ್ಕೆ ತಾನು ಇತರ ಸಮಯದಲ್ಲಾದರೆ ನೂರು ರೂಪಾಯಿಗಳನ್ನೂ ಒಂದು ರಾತ್ರಿ ಗಾಗಿ ಕೊಡಬಹುದಿತ್ತು. ಆದರೆ ಆಕೆ ಇತರ ಹೆಂಗಸರಂತವಳಲ್ಲ. ಅವಳು ತನಗೆ ಮಂತ್ರ ಮಾಡಿರಲೂ ಬಹುದು. ಅದರಿಂದಾಗಿಯೇ ತನಗೆ ಉಡುಪಿಗೆ ಹೋಗಲು ವ್ಯವಸ್ಥೆಯಾಗಿರಬೇಕು. ತನ್ನ ಮನಸ್ಸಿನಲ್ಲಿದ್ದು ದನ್ನೆಲ್ಲಾ ಆಕೆ ಓದಿದಳಲ್ಲದೆ, ಅವಳ ಮನಸ್ಸನ್ನು ತನ್ನ ಮೇಲೆ ಆಕೆ ಹೇರಿಸಿದಳು. ಅವಳ ಭವಿಷ್ಯ ಕಥನ ಕಲೆಯನ್ನು ನೆನೆದು ಅವನು ಇನ್ನೊಮ್ಮೆ ಚಕಿತನಾದ. ಅವಳ ಹಾವಭಾವಗಳು, ಅವಳ ವಿಲಕ್ಷ ಣವಾದ ಧ್ವನಿ, ಎದೆಯೊಳಗೇ ಹೊಕ್ಕುವಂಥ ಅವಳ ಮಾತುಗಳು, ಅವಳ ಸೌಂದರ್ಯಯುಕ್ತವಾದ ದೇಹ, ಅವಳ ಮನಮೋಹಕ ಭಾವ ಭಂಗಿಗಳು, ಅವಳ ಸ್ಥೈರ್ಯ—ಇವೆಲ್ಲ ಅವನ ಕಣ್ಣು ಮುಂದೆ ನಿಂತವು.

ತಾನು ಅಪರಾಧಿಯಲ್ಲವೆಂದು ಆಕೆ ಏಕೆ ಹೇಳಿದಳು ? ಅವಳಿಗೆ ಅದು ಹೇಗೆ ಗೊತ್ತಾಯಿತು ? ಅದೂ ಇನ್ನು ನಾಲ್ಕು ದಿನಗಳಲ್ಲಿ ತನ್ನ ಚಿಂತೆ ಪರಿಹಾರವಾಗುವುದಂತೆ. ಅವಳ ಮಾತನ್ನು ಅಲ್ಲಗಳೆಯಲು ಸಾಧ್ಯವಿಲ್ಲ. ಅವಳ ಸ್ವರದಲ್ಲೇ ಒಂದು ರೀತಿಯ ನಂಬುಗೆ. ಒಂದು ವಿಧದ ಆತ್ಮ ವಿಶ್ವಾಸವಿತ್ತು.

ಬಸ್ ನಿಲ್ದಾಣಕ್ಕೆ ಸಮೀಪಿಸುವಾಗ ಅವನಿಗೆ ಮುಂಡಪ್ಪನ ನೆನಪಾಯಿತು. ಅವನು ಬಹುಶಃ ಇಂದು ಬಂದಿರಬಹುದು. ತಾನು ಮಾವ ಸತ್ತುದಕ್ಕೆ ರುಕ್ಕುವಿಗೆ ಸಮಾಧಾನ ಹೇಳಲಿಕ್ಕಾದರೂ ನಾಲ್ಕು ದಿನ ರಜೆ ತೆಗೆದುಕೊಳ್ಳದಿದ್ದುದಕ್ಕೆ ಅವನು ತನ್ನ ಮೇಲೆ ಕೋಪಿಸಬಹುದು. ಅವನಿಗೆ ಮಾವನ ಮರಣಶಾಸನದ ವಿಚಾರ ತಿಳಿದರೆ, ಅವನು ಮಾವನ ಮರಣದ ಕುರಿತು ತನ್ನ ಮೇಲೆ ಸಂದೇಹ ಪಡಲೂ ಸಾಕು ಎಂದು ನಾರಾಯಣನಿಗೆ ತೋರಿತು.

''ಡ್ರೈವರ್, ನಾವು ಇಲ್ಲಿ ಇಳಿಯುತ್ತೇವೆ'' ಎಂದು ಹಿಂದೆ ಕುಳಿತಿದ್ದವರಲ್ಲಿ ಒಬ್ಬಳು ಅವನ ಕಿವಿಯ ಸಮೀಪ ಹೇಳಿದಳು.

ಅವನು ಬಸ್ಸನ್ನು ನಿಲ್ಲಿಸಿದ. ಅವರಿಬ್ಬರೂ ಬಸ್ಸಿನಿಂದಿಳಿದರು. ಹೋಗುವಾಗ ಅವರು ಹಿಂತಿರುಗಿ ಅವನ ಮುಖವನ್ನು ಕೂಡಾ ನೋಡಲಿಲ್ಲ.

ಅವನು ಆಗ ಒಂದು ದೀರ್ಘ ಶ್ವಾಸವನ್ನು ಬಿಟ್ಟ. ಬಸ್ಸು ಘೋರಿಡುತ್ತಾ ನಿಲ್ದಾಣಕ್ಕೆ ಹೋಯಿತು.

## ೧೧

ನಾರಾಯಣ ಬಸ್ಸಿನ ನಿಲುಮನೆಗೆ ಹೋಗಿ ಅಲ್ಲಿ ಬಸ್ಸನ್ನು ನಿಲ್ಲಿಸಿ ರಜೆಗೆ ಅರ್ಜಿ ಹಾಕಿದ. ಅಲ್ಲಿಯ ಗುಮಾಸ್ತರು ಅವನನ್ನು ಇನ್ನೊಂದು ಸಣ್ಣ ಸವಾರಿ ಮಾಡಿ ಬರಬೇಕೆಂದರು. ಅವನು ತಾನಿನ್ನು ಒಂದು ಗಂಟೆಯ ಬಳಿಕ ಬರುತ್ತೇನೆಂದ. ಅವರು ಆದೀತೆಂದರು.

ನಿಲುಮನೆಯ ಹೊರಗೆ ಬಂದು ಅವನು ಬಾಡಿಗೆಗೆ ಒಂದು ಸೈಕ

ಲ್ಲನ್ನು ಪಡೆದುಕೊಂಡು ತನ್ನ ಮನೆಗೆ ಹೋದ. ದಾರಿಯಲ್ಲಿ ಅವನ ಒಬ್ಬ ಸ್ನೇಹಿತ ಸಿಕ್ಕಿದವ ಅವನನ್ನು ನಿಲ್ಲಿಸಿದ.

"ಮೋಟಾರು ಡ್ರೈವರ್ರು ಇವತ್ತು ಸೈಕಲ್ ಡ್ರೈವರರಾದ್ರಲ್ಲ!" ಎಂದು ಅವನು ವಿನೋದದಲ್ಲಿ ಹೇಳಿದ.

"ಏ ಮಾರಾಯಾ!" ನಾರಾಯಣನೆಂದ. "ಈಗ ಮಾತಾಡ್ಲಿಕ್ಕೆ ಸಮಯವಿಲ್ಲ. ಅನ್ನ ನೀರಿಲ್ಲದೆ ನಾನು ಸಾಯ್ತೀನೆ. ಈಗತಾನೇ ಉಡುಪಿಯಿಂದ ಬಂದೆ."

"ಆಯ್ತಪ್ಪ. ಈಗ ನೀನೇ ದೊಡ್ಡವ. ಮಾವನದ್ದೆಲ್ಲ ನಿನ್ಗೇ ಸಿಕ್ತದಂತಲ್ಲ! ಅನ್ನ ಮನೆ, ಐದಾರು ಸಾವಿರ ರೂಪಾಯಿ, ಎಲ್ಲ!"

"ಏನೋ ನಂಗೊತ್ತಿಲ್ಲಪ್ಪಾ. ನನ್ಗೆ ಹಸಿವಾಗ್ತದೆ."

"ದೊಡ್ಡವನಾದೊಡ್ನೆ ನನ್ನನ್ನು ಮರೀಬೇಡ."

"ದೊಡ್ಡವನಾಗ್ಬೇಕಲ್ಲ?"

"ಅಯ್ಯೋ! ನನ್ಗೇನೂ ಗೊತ್ತಿಲ್ವೆಂದು ಭಾವಿಸಿದ್ದೀಯಾ? ನಿನ್ನ ಮಾವ ಸಾಯುವ ಮುಂಚಿನ ದಿನವೇ ವಿಲ್ಲನ್ನು ರಿಜಿಸ್ತ್ರಿ ಮಾಡ್ಸಿದ್ದನಂತೆ! ಅಬ್ಬಾ! ನನ್ಗೊಂದೂ ಗೊತ್ತಿಲ್ವೆಂದು ನೀನು ಯೋಚಿಸಿದ್ದೀಯ್ಯಾ?"

"ನಿನ್ಗೆ ಯಾರು ಹೇಳಿದ್ರು ಈ ಸುದ್ದಿ?"

"ನಿನ್ನ ಭಾವ ಮುತ್ತ. ಈಗ ನಾನು ಅವ್ನ ಅಂಗ್ಡಿಯಿಂದ್ಲೇ ಬರ್ತಿರೋದು. ಅಂಗ್ಡಿ ಅವ್ನಿಗಂತೆ."

"ಹೂಂ. ನಾ ಹೋಗ್ತೇನೆ. ಮತ್ತೆ ಮಾತಾಡೋಣ," ಎನ್ನುತ್ತ ನಾರಾಯಣ ಸೈಕಲನ್ನೇರಿದ.

"ಒಂದು ಕಾಫಿಯಾದ್ರೂ ಕೊಡ್ಲಿಕ್ಕೆ ಮರಿಬೇಡ ಮಾರಾಯಾ!" ಎಂದು ಅವನು ಮತ್ತೆ ಗಟ್ಟಿಯಾಗಿ ಕೂಗಿದ.

ನಾರಾಯಣ ತಲೆಯಲ್ಲಾಡಿಸುತ್ತಾ ಮುಂದರಿದ.

ಮನೆಯ ಮುಂದೆ ಸೈಕಲ್ ನಿಲ್ಲಿಸಿ ಒಳಗೆ ಹೋದ. ರುಕ್ಕು ಪುಟ್ಟುವನ್ನು ಹಿಡಿದುಕೊಂಡು ಕುಳಿತಿದ್ದಳು.

"ಊಟ ತಯಾರಿದೆಯೇ ? ಹಸಿವಾಗುತ್ತದೆ" ಎನ್ನುತ್ತ ಅವನು ಬಚ್ಚಲು ಕೊಟ್ಟಿಗೆಗೆ ಕೈ ಕಾಲು ತೊಳೆಯಲಿಕ್ಕೆ ಹೋದ.

ಅವನು ಹಿಂದೆ ಬರುವಾಗ ರುಕ್ಕು ಅವನಿಗೆ ಬಟ್ಟಲಿನಲ್ಲಿ ಅನ್ನ ಬಡಿಸಿದ್ದಳು. ಅವನು ಮಣೆಯ ಮೇಲೆ ಕುಳಿತುಕೊಂಡ ಬಳಿಕ ಪಲ್ಯವನ್ನು ಬಡಿಸಿದಳು. ಅವನು ಗವಗವನೆ ಉಣ್ಣತೊಡಗಿದ. ಹಸಿವೆಯ ಮಬ್ಬಿನಲ್ಲಿ ಅವನಿಗೆ ಪಲ್ಯದ ರುಚಿಯೂ ತಿಳಿಯಲಿಲ್ಲ.

ರುಕ್ಕು ಅಲ್ಲೇ ದೂರದಲ್ಲಿ ನಿಂತುಕೊಂಡಿದ್ದಳು. ಅವನು ಅವಳನ್ನೊಮ್ಮೆ ನೋಡಿದ. ಅವಳು ಮಾತಾಡಲಿಲ್ಲ. ಅವಳ ಕಣ್ಣುಗಳು ಕೆಂಪಾಗಿದ್ದುವು. ತಲೆ ಕೂದಲುಗಳು ಒಣಗಿ ಗಾಳಿಯಲ್ಲಿ ಹಾರಾಡುತ್ತಿದ್ದುವು. ಹಣೆಯಲ್ಲಿ ಕುಂಕುಮವೂ ಇರಲಿಲ್ಲ. ಮಾಸಿದ ಒಂದು ಸೀರೆಯನ್ನು ಆಕೆ ಉಟ್ಟುಕೊಂಡಿದ್ದಳು.

ಯೋಚನೆಗಳು ಹಲವು ಅವನ ಮನಸ್ಸಿನಲ್ಲಿ ನಲಿಯುತ್ತಿದ್ದಂತೆಯೇ ಅವನ ಊಟ ಮುಗಿಯಿತು. ಹೊರಗೆ ಹೋಗಿ ಮುಖ ತೊಳೆದುಕೊಂಡು ಬಂದು ಪುನಃ ಅಂಗಿ ಇಜಾರಗಳನ್ನು ಧರಿಸಿ ಹೊರಡಲು ಸಿದ್ಧನಾದ. ರುಕ್ಕು ಅವನು ಉಂಡ ಬಟ್ಟಲನ್ನು ತೊಳೆದು ಒಳಗೆ ಕೊಂಡು ಹೋಗಿ ಇಟ್ಟಳು.

ಪುಟ್ಟು "ಅಪ್ಪ ಅಪ್ಪ" ಎಂದು ಕರೆದಳು.

ನಾರಾಯಣ ತನ್ನ ಗಡಿಯಾರವನ್ನು ನೋಡಿದ. ಇನ್ನೂ ಇಪ್ಪತ್ತೈದು ನಿಮಿಷಗಳಿದ್ದುವು ಅವನು ಬಸ್ಸಿನ ನಿಲ್ದಾಣಕ್ಕೆ ಹೋಗಲಿಕ್ಕೆ. ಅವನು ಅವಳನ್ನು ಎತ್ತಿಕೊಂಡ.

"ಅಪ್ಪ, ಅಮ್ಮ, ಹೂ" ಎಂದು ಅವಳು ಕೈಗಳನ್ನಾಡಿಸಿದಳು. ಅವನು ಅವಳ ಗಲ್ಲಕ್ಕೊಂದು ಮುತ್ತನಿಟ್ಟ. ಅವಳು ಅವನ ತಲೆಗೆ ಕೈ ಹಾಕಿ ತಲೆಕೂದಲನ್ನೆಲ್ಲಾ ಕೆದರಿದಳು.

"ಥೂ! ನನ್ಗೆ ಇನ್ನೊಮ್ಮೆ ತಲೆ ಬಾಚುವಂತೆ ಮಾಡ್ದಿಯಲ್ಲ! ತಡವಾಯ್ತು" ಎಂದು ಅವನು ಮೃದುವಾಗಿ ಅವಳ ಬೆನ್ನಿಗೆ ಹೊಡೆದ.

ರುಕ್ಕು ಆಗ ಬಂದು ಅವಳನ್ನೆತ್ತಿಕೊಂಡಳು. ಪುಟ್ಟು "ಅಪ್ಪ ಅಪ್ಪ" ಎಂದು ಅಳತೊಡಗಿದಳು.

"ಈಗ ಬರ್ತೇನೆ. ನಿನ್ಗೆ ತಿಂಡಿ ತರ್ತೇನೆ" ಎನ್ನುತ್ತ ನಾರಾಯಣ ತಲೆ ಬಾಚತೊಡಗಿದ.

"ಮುತ್ತ ಇಲ್ಲಿಗೆ ಬಂದ್ನೆ? ಏನಾದ್ರೂ ಹೇಳಿದ್ನೆ?" ಎಂದು ಅವನು ರುಕ್ಕುವಿನೊಡನೆ ಕೇಳಿದ.

"ಇಲ್ಲ," ಎಂದು ಆಕೆ ಉತ್ತರಿಸಿದಳು.

"ಮುಂಡಪ್ಪಣ್ಣ ಬರ್ಲಿಲ್ಲವೆಂದು ತೋರ್ತದೆ."

" ಈ ವರೆಗೆ ಏನೂ ಸುದ್ದಿಯಿಲ್ಲ."

"ಆಯ್ತು. ನಾನು ನಾಲ್ಕು ಗಂಟೆಗೆ ಬರ್ತೇನೆ. ರಜೆಗೆ ಅರ್ಜಿ ಹಾಕಿದ್ದೇನೆ. ಮುಂಡಪ್ಪಣ್ಣ ಆ ಒಳ್ಗೆ ಬಂದ್ರೆ ಅವ್ರನ್ನು ಇಲ್ಲೇ ನಿಲ್ಲ ಲಿಕ್ಕೆ ಹೇಳು."

ಎನ್ನುತ್ತ ಅವನು ಹೊರಗೆ ಬಂದು ಸೈಕಲನ್ನೇರಿದ. ಪುಟ್ಟು ಇನ್ನೂ ಬೊಬ್ಬೆ ಹಾಕುತ್ತಿದ್ದಳು.

"ಬರ್ತೇನೆ ಮಗೂ, ತಿಂಡಿ ತರ್ತೇನೆ" ಎಂದು ಅವನು ಹಿಂದಿರುಗಿ ಅವಳಿಗೆ ಸಮಾಧಾನ ಹೇಳಿದ.

ಬಸ್ಸನ್ನು ನಿಲ್ದಾಣಕ್ಕೆ ಕೊಂಡು ಹೋಗವಾಗ ಹತ್ತು ನಿಮಿಷ ತಡವಾಗಿತ್ತು. ಅಲ್ಲಿ ಕಾಯುತ್ತಿದ್ದ ಜನರು ಒಡನೆಯೇ ಬಸ್ಸನ್ನೇರಿ ಕುಳಿತರು.

ಬಸ್ಸು ಹೊರಡುವಾಗ ಒಬ್ಬ ಪೋಲೀಸಿನವ ಅಲ್ಲಿಗೆ ಬಂದ. ಅವನ ಹಿಂದೆ ಒಬ್ಬ ಪೋಲೀಸ್ ಅಧಿಕಾರಿಯೂ ಇದ್ದರು.

"ರಾಯರಿಗೆ ಒಂದು ಸೀಟು ಕೊಡಿ" ಎಂದು ಪೋಲೀಸಿನವ ಏಜೆಂಟರೊಡನೆ ಹೇಳಿದ.

"ಕುಳಿತುಕೊಳ್ಳಲಿ ಅವರು. ಆದರೆ ಸ್ಥಳವಿಲ್ಲ" ಎಂದು ಏಜೆಂಟರು ಹೇಳಿದರು.

ಪೋಲೀಸಿನವ ಬಸ್ಸಿನ ಒಂದು ಸುತ್ತು ಬಂದ. ಮುಂದಿನ ಸೀಟಿನಲ್ಲಿ ಒಬ್ಬ ಮುದುಕ ಕುಳಿತಿದ್ದ. ಅವನನ್ನು ನೋಡಿ ಪೋಲೀಸಿನವ ಅವನನ್ನು ಹಿಂದೆ ಕುಳಿತುಕೊಳ್ಳಲು ಹೇಳಿದ.

ನಾರಾಯಣನಿಗೆ ಆಗ ಬಹಳ ಗಾಬರಿಯಾಗಿತ್ತು. ಇವರು ತನ್ನನ್ನೇ ಹುಡುಕುತ್ತಿರುವರೆಂದು ಅವನು ಆಲೋಚಿಸಿದ. ಅಲ್ಲಿಂದ ಒಮ್ಮೆಲೇ ಓಡಿಬಿಡೋಣವೇ ಎಂದೂ ಅವನಿಗೆ ತೋರಿತು. ಆದರೆ ತಾನಾಗಿ ಏಕೆ ಓಡಬೇಕು, ಅವರಿಗೆ ಫಕ್ಕನೆ ಸಂಶಯವನ್ನೇಕೆ ಉಂಟು ಮಾಡಬೇಕು ಎಂದು ಎಣಿಸಿ ಅವನು ಸುಮ್ಮನೆ ಕುಳಿತುಕೊಂಡ.

ಪೋಲೀಸಿನವನೆಂದುದಕ್ಕೆ ಮುದುಕ ಕಿವಿಗೊಡಲಿಲ್ಲ. ಅಧಿಕಾರಿಗಳು ಹಿಂದಿನಿಂದ ನಿಂತುಕೊಂಡಿದ್ದರು.

"ಇದು ಫಸ್ಟ್ ಕ್ಲಾಸ್ ಆಫೀಸರ್ರಿಗೆ" ಎಂದು ಪೋಲೀಸಿನವ ತುಸು ಗಟ್ಟಿಯಾಗಿ ಹೇಳಿದ.

"ನಾನು ಏಳೋದಿಲ್ಲ" ಎಂದು ಮುದುಕ ಹೇಳಿದ.

"ಆಫೀಸರ್ರ ಸೀಟು. ಇಲ್ಲಿಂದ ಏಳು ಬೇಗ" ಎಂದು ಪೋಲೀಸಿನವ ಪುನಃ ಗದರಿಸಿದ.

"ಆಫೀಸರರೇ ಬರಲಿ, ಹೇಳಲಿಕ್ಕೆ" ಎಂದು ಮುದುಕ ಮೆಲ್ಲನೆ ನುಡಿದ.

"ಆಫೀಸರ್ರು ಇಲ್ಲೇ ಇದ್ದಾರೆ. ನಿಮಗೆ ಆ ಕಾನೂನು ಬೇಡ. ಬೇಗನೆ ಎದ್ದುಬಿಡಿ"

"ಇಲ್ಲೇನಾದರೂ ಇದು ಆಫೀಸರರ ಸೀಟು ಎಂದು ಬರೆದುಹಾಕಿಲ್ಲ. ನಾನು ಏಳುವುದಿಲ್ಲ. ಬೇಕಾದ್ದುಮಾಡಿ"

ಪೋಲೀಸಿನವ ಅವಾಕ್ಕಾದ. ಆದರೂ ಅವನು ಇಂಥ ಮುಖಭಂಗವನ್ನು ತನ್ನ ಹಿರಿಯ ಅಧಿಕಾರಿಗಳ ಮುಂದೆ ಸಹಿಸಲಾರನಾದ.

"ಏ ಕಂಡಕ್ಟರ್! ಇಲ್ಲಿ ಫಸ್ಟ್ ಕ್ಲಾಸನ್ನು ಖಾಲಿ ಮಾಡಿಸು" ಎಂದು ಅವನು ಕಂಡಕ್ಟರನನ್ನು ಕರೆದ.

ಕಂಡಕ್ಟರು ಉಪಾಯವಿಲ್ಲದೆ ಬಂದು ಮುಂದಿನ ಸೀಟಿನಲ್ಲಿ ಕುಳಿತಿದ್ದವರೊಡನೆ "ಸಬ್ ಇನ್ಸ್ಪೆಕ್ಟರ್ ಇದ್ದಾರೆ. ಯಾರಾದರೂ ಏಳಿ" ಎಂದು ಬಿನ್ನವಿಸಿದ.

"ನಾವು ಏಳುವ ಹಾಗಿಲ್ಲ. ಅದನ್ನು ಮೊದಲೇ ಹೇಳಬೇಕಿತ್ತು. ಸಬ್‌ಇನ್ಸ್ಪೆಕ್ಟರರಾದರೇನು, ಯಾರಾದರೇನು? ನಾವೂ ಟಿಕೇಟು ಪಡ

ಕೊಂಡೇ ಕುಳಿತವರು” ಎಂದು ಮುದುಕನೂ ಅವನ ಬದಿಯಲ್ಲಿದ್ದ ಮತ್ತೊಬ್ಬನೂ ಕಂಡಕ್ಟರೊಡನೆ ಹೇಳಿದರು.

“ನಿಮ್ಮನ್ನೀಗ ಎಳ್ದು ಹಾಕುತ್ತೇನೆ” ಎಂದು ಔಡುಕಚ್ಚಿ ಪೋಲೀಸಿನವ ಮುಂದೆ ಬಂದ.

‘‘ಆಯ್ತು. ನೀನು ಎಳೆದು ಹಾಕುವಾಗ ನೋಡುವ,” ಎಂದು ಮುದುಕ ಒಂದು ಪೇಪರನ್ನು ಬಿಡಿಸಿ ಓದತೊಡಗಿದ.

ಸಬ್ ಇನಸ್ಪೆಕ್ಟರರು ಹಿಂದೆ ಹೋದರು. ಅಲ್ಲಿ ಕಂಡಕ್ಟರು ತಾನು ಕುಳಿತುಕೊಳ್ಳುವ ಸ್ಥಳದಲ್ಲಿ ಅವರನ್ನು ಕುಳ್ಳಿರಿಸಿದ. ಪೋಲೀಸಿನವನೂ ಉಪಾಯವಿಲ್ಲದೆ ಮುಂದೆ ಕುಳಿತವರನ್ನು ದುರುಗುಟ್ಟಿ ನೋಡುತ್ತ ಹಿಂದೆ ಕುಳಿತಿದ್ದವರ ಕಾಲ ಬುಡದಲ್ಲಿ ಕುಳಿತುಕೊಂಡ. ಸಬ್‌ಇನಸ್ಪೆಕ್ಟರವರು ಏನೋ ಪುಸ್ತಕವನ್ನು ತೆಗೆದು ಓದತೊಡಗಿದರು.

ಇತರ ಪ್ರಯಾಣಿಕರೂ ಪೋಲೀಸಿನವನನ್ನು ನೋಡಿ ನಗುತ್ತಿದ್ದರು.

ನಾರಾಯಣನಿಗೆ ಆಗ ತುಸು ಧೈರ್ಯವಾಯಿತು. ಅವರು ಏನೋ ಎಲ್ಲಿಗೋ ಹೋಗುವ ಪೋಲೀಸರಾಗಿರಬಹುದೆಂದುಕೊಂಡನವ.

ಬಸ್ಸನ್ನು ಬಿಡುವಾಗ ಅರ್ಧಗಂಟೆ ತಡವಾಗಿತ್ತು. ಸ್ವಲ್ಪ ವೇಗವಾಗಿಯೇ ಅವನು ಅದನ್ನು ಓಡಿಸಿದ.

‘‘ಈ ಮೋಟಾರಿನವರಿಗೂ ಈ ಪೋಲೀಸರಿಗೂ ಒಳ್ಳೆಯ ಜೋಡಿ,” ಮುದುಕನೆಂದ. ‘‘ಹೀಗೆಯೇ ಆದರೆ ಸದ್ಯದಲ್ಲೇ ಸರಕಾರದವರು ಯಾರೂ ರಸ್ತೆಯಲ್ಲಿ ನಡೆಯಕೂಡದೆಂದು ವಿಧಿಸಲೂ ಸಾಕು.’’

ಅವರ ಸಂಭಾಷಣೆ ಮುಂದುವರಿಯಿತು.

ನಾರಾಯಣನಿಗೆ ಅವರ ಸಂಭಾಷಣೆಯನ್ನು ಕೇಳುವ ಮನಸ್ಸಿಲ್ಲದಿದ್ದರೂ, ಅವರು ಮಾತನಾಡುವ ಸ್ವರ ಅವನ ಕಿವಿಗೆ ಬೀಳುತ್ತಿತ್ತು. ಅದೂ ಅವರು ಮೋಟರ್ ಅಪಘಾತದಲ್ಲಿ ಮೃತ ಪಟ್ಟವನ ಕುರಿತು ಮಾತಾಡುವಾಗ ಅವನ ಮನಸ್ಸು ಕಾವೇರಿತು. ಅವನ ಕೈಗಳು ನಡುಗತೊಡಗಿದುವು. ಮುಖದಲ್ಲಿ ಬೆವರು ಬಂತು. ಇವರಿಗೆ ಮಾತನಾಡಲು

ಬೇರೆ ಯಾವ ವಿಷಯವೂ ಇಲ್ಲವೇ ಎಂದು ಅವನಿಗೆ ತೋರಿತು. ಇವರ ಹಾಗೆಯೇ ಈ ದುರ್ಘಟನೆಯ ಕುರಿತು ಎಷ್ಟುಮಂದಿ ಎಷ್ಟು ವಿಧವಾಗಿ ಮಾತಾಡುತ್ತಿರುವರೋ ಎಂದು ಅವನು ನೆನಸಿದ.

ಅಷ್ಟರಲ್ಲಿ ಮಳೆ ಬಂತು. ಎಲ್ಲರೂ ಪರದೆಯನ್ನಿಳಿಸಿ ಅದನ್ನು ಕಟ್ಟಿದರು. ನಾರಾಯಣ ಒಳಗಿನ ದೀಪದ ಸ್ವಿಚ್ ಹಾಕಿದ. ಅವನ ಮುಂದಿದ್ದ ಗಾಜಿನ ಹಲಗೆಯ ಮೇಲೆ ನೀರ ಹನಿಗಳು ಒಂದೇ ಸವನೆ ಬೀಳುತ್ತಿದ್ದುವು. ಅವನು ಅದನ್ನು ಹೊರಗೆ ಕೈಹಾಕಿ ಆಗಾಗ ಉಜ್ಜುತ್ತಿದ್ದ.

"ಅದಕ್ಕೆ ವೈಪರ್ ಇದೆಯಲ್ಲ?" ಕಂಡಕ್ಟರ ಜುವಾನ ನಾರಾಯಣ ಗಾಜನ್ನು ಕೈಯಿಂದ ಒರಸುತ್ತಿರುವುದನ್ನು ಕಂಡು ಹೇಳಿದ. "ಅಲ್ಲೇ ಅದ್ರ ಸ್ವಿಚ್ ಇದೆ. ಅದು ಒಳ್ಳೆಯದಾಗಿ ವರ್ಕ ಆಗ್ತದೆ."

ನಾರಾಯಣನಿಗೆ ಆತನಕ ವಿದ್ಯುಚ್ಛಕ್ತಿಯ ಬಲದಿಂದ ಗಾಜನ್ನು ಉಜ್ಜುವ ಉಪಕರಣದತ್ತ ಗಮನ ಹೋಗಿರಲಿಲ್ಲ. ಅವನು ಯಾವಾಗಲೂ ನಡೆಸುತ್ತಿದ್ದ ಬಸ್ಸಿನ ಆ ಉಪಕರಣ ಎಷ್ಟೋ ಸಮಯದ ಹಿಂದೆ ಕೆಟ್ಟು ಹೋಗಿತ್ತು. ಅವನು ಅದರ ಸ್ವಿಚ್ಚನ್ನು ಹಾಕಿದ.

ಒಡನೆಯೇ ಗಾಜಿನ ಮೇಲೆ ಉಜ್ಜುವ ಕಡ್ಡಿ 'ಕಟಕ್ ಕಟಕ್' ಎಂದು ಶಬ್ದಮಾಡುತ್ತ ಚಲಿಸ ತೊಡಗಿತು.

ಅವನಿಗೆ ಅದನ್ನು ನೋಡುವಾಗ ಏನೋ ಒಂದು ವಿಚಿತ್ರವಾದ ಭಾವನೆ ಮನಸ್ಸಿನಲ್ಲಿ ಮೂಡಿತು. ಅದು ಅರ್ಧಚಂದ್ರಾಕಾರದಲ್ಲಿ ಚಲಿಸುತ್ತಿತ್ತು. ತನ್ನ ಬಸ್ಸಿಗೂ ಅಂಥದೊಂದು ಉಪಕರಣ ಬೇಕೆಂದು ಅವನಿಗೆ ಆಗ ತೋರಿತು. ಅದು ಇದ್ದರೆ ಮಳೆಯಲ್ಲೂ ಮಂಜಿನಲ್ಲೂ ಏನೊಂದೂ ಆತಂಕವಿಲ್ಲದೆ ಮೋಟರನ್ನು ನಡೆಸಬಹುದು. ತನ್ನ ದೃಷ್ಟಿಪಥಕ್ಕೆ ಯಾವುದೂ ಅಡ್ಡ ಬರಲಿಕ್ಕಿಲ್ಲವೆಂದು ಅವನು ಎಣಿಸಿದ.

ಆದರೆ ಮರು ಘಳಿಗೆಯಲ್ಲೇ ತನಗೆ ಇನ್ನು ಮೋಟರನ್ನು ನಡೆಸುವ ಯೋಗ ಉಂಟೋ ಇಲ್ಲವೋ ಎಂದು ನಿರಾಶೆಯಿಂದ ಉಸಿರು ಬಿಟ್ಟ. ತಾನು ಮೋಟರ್ ನಡೆಸುವುದು ಬಹುಶಃ ಈ ಜನ್ಮದಲ್ಲೇ ಇದು ಕೊನೆಯ ದಿನವಾಗಬಹುದೆಂದು ಅವನಿಗೆ ಹೊಳೆಯಿತು.

ಬಸ್ಸು ಮುಂದಿನ ನಿಲ್ದಾಣಕ್ಕೆ ತಲುಪುತ್ತಲೇ "ಏನೋ ನಾರಾಯಣ? ಸರ್ವಿಸ್ ಎಷ್ಟು ತಡವಾಯ್ತು! ಜನರು ಇಲ್ಲಿ ಕಾದು ಕುಳಿತಿದ್ದಾರೆ" ಎಂದು ಅಲ್ಲಿಯ ಏಜೆಂಟನೊಬ್ಬ ಗುಡುಗಿದ.

ನಾರಾಯಣ ಅದಕ್ಕೆ ಮರು ಮಾತಾಡಲಿಲ್ಲ. ಅವನಿಗೆ ಆ ಏಜೆಂಟನ ಪೂರ್ವೇತಿಹಾಸ ಚೆನ್ನಾಗಿ ಗೊತ್ತಿತ್ತು.

"ನಾನು ಹೇಳ್ತೀನೆ" ಆ ಏಜೆಂಟ ಇತರರಿಗೆ ಬೋಧಿಸುತ್ತಿದ್ದ. "ಈ ಬಸ್ಸಿನ ಕೆಲಸ ಯಾರಿಗೂ ಒಳ್ಳೆದಲ್ಲ. ನಾನು ೧೫ಗಳನೇ ಇಸವಿಯಿಂದ ಈ ಕೆಲಸದಲ್ಲಿದ್ದೇನೆ. ಆದರೆ ನನ್ನವಸ್ಥೆನೋಡಿ! ನಾನೆಷ್ಟು ಅದರಿಂದಾಗಿ ವೃದ್ಧಿಯಾಗಿದ್ದೇನೆ! ನನಗೆ ಬಿಟ್ಟು ನನ್ನ ಮಕ್ಕಳು ಮೊಮ್ಮಕ್ಕಳಿಗೂ ಈ ಕೆಲಸಬೇಡ."

ಅವನು ಬಾಯಿಯಲ್ಲಿ ಹೀಗೆ ಹೇಳುತ್ತಿದ್ದರೂ ಆ ಕೆಲಸವನ್ನು ಅವನು ಮೆಚ್ಚುತ್ತಿರುವವನಂತೆ ಉಳಿದವರಿಗೆ ತೋರುತ್ತಿದ್ದ. ಅಷ್ಟು ಭಾರವಾಗಿದ್ದನವ. ನೋಡುವಾಗ ಅವನು ಬಹಳ ಗಂಭೀರ ವ್ಯಕ್ತಿ. ಕೈಯ್ಯಲ್ಲಿ ಬೀಡಿ ಮತ್ತು ಪತ್ರಿಕೆ ತಪ್ಪಬಾರದು. ದಪ್ಪ ಕನ್ನಡಿಯ ಕನ್ನಡಕವನ್ನಿಟ್ಟು ಮಹಾ ಅಟ್ಟಹಾಸದಿಂದ ಅವನು ಪತ್ರಿಕೆಯನ್ನೋದುತ್ತ ಕಾಲಹರಣ ಮಾಡುವನು. ಯಾರಾದರೂ ಬಂದು ಅವನೊಡನೆ ಟಿಕೇಟು ಕೇಳಿದರೆ ಅವನು ಅತ್ತ ಕಿವಿಗೊಡಲಾರ. ಎಷ್ಟು ಗಂಟೆಗೆ ಬಸ್ಸು ಎಂದು ಕೇಳಿದರೂ ಅವನು ಹೇಳಲಾರ. ನಲ್ವತ್ತು ವರ್ಷ ಅವನು ಸಾರ್ವಜನಿಕ ವಾಹನ ಸೌಕರ್ಯಕ್ಕೆ ಸೇವೆ ಸಲ್ಲಿಸಿದ ಫಲವಾಗಿ ಅವನ ಕಿವಿ ಕಿವುಡಾಗಿದೆಯೋ ಎಂದು ಯಾರಾದರೂ ಭಾವಿಸಲೂಬಹುದು. ಆದರೆ ಅವನ ಸ್ನೇಹಿತರು ಇಲ್ಲವೇ ಅವನ ಮನೆ ಮಾತನ್ನಾಡುವವರು ಬಂದರೆ ಅವರಿಗೆ ಕೂಡಲೇ ಟಿಕೇಟು ಬರೆಯುವನು. ಉಳಿದವರಿಗೆ ಬಸ್ಸು ಬರುವತನಕ 'ಬಸ್ಸು ಬರಲಿ' ಎನ್ನುವನು. ಬಸ್ಸು ಬಂದ ಬಳಿಕ 'ನಿಮಗೇನು ಅವಸರ?' ವೆಂದು ಗರ್ಜಿಸುತ್ತ ತನಗೆ ಬೇಕಾದವರಿಗೆಲ್ಲ ಟಿಕೇಟುಗಳನ್ನು ಕೊಡುವನು. ಬಸ್ಸು ಬಿಡಲಿಕ್ಕಾಗುವಾಗ 'ಟಿಕೇಟಿಲ್ಲ' ವೆಂದು ತನ್ನ ಲೆಕ್ಕದ ಪುಸ್ತಕವನ್ನು ಮಡಚಿ ಪೆಟ್ಟಿಗೆಯಲ್ಲಿಟ್ಟು ಬೀಗ ಹಾಕಿ ಪುನಃ ಕಾಲನ್ನು ಮೇಜಿನ ಮೇಲೆ ಇರಿಸಿ ಓದತೊಡಗುವನು.

ಅವನ ಪ್ರಭಾವ ಬಸ್ಸಿನ ಒಡೆಯರ ಮೇಲೂ ಬಹಳವಿದೆಯೆಂದು ಬಸ್ಸಿನ ನೌಕರರಿಗೆ ಗೊತ್ತಿತ್ತು. ಅವನು ಯಾವುದಕ್ಕೂ ಸಿದ್ಧನಿದ್ದವನೆಂದು ಎಲ್ಲರಿಗೂ ತಿಳಿದಿದ್ದುದರಿಂದ ಅವನೊಡನೆ ಯಾರೂ ವಾದಕ್ಕೆ ನಿಲ್ಲುತ್ತಿದ್ದಿಲ್ಲ.

ಪುನಃ ಬಸ್ಸಿನಲ್ಲಿ ಜನರು ಕುಳಿತರು. ನಾರಾಯಣನೂ ಕುಳಿತುಕೊಂಡ. ಆದರೆ ಜುವಾನ ಬರಲಿಲ್ಲ.

ನಾರಾಯಣ ಹಾರ್ನು ಹೊಡೆದ.

"ಏ ನಿಲ್ಲೋ ನಾರಾಯ್ಣ. ಒಬ್ರು ಬರ್ತಾರೆ," ಎಂದು ಏಜೆಂಟ ಕಣ್ಣಾರಳಿಸಿದ.

"ನಿಲ್ಲಲಿಕ್ಕೆ ಆಗೋದಿಲ್ಲ. ಬಸ್ಸಿಗೆ ತಡವಾಗ್ತದೆ. ಜುವಾನ್ ಬಾರೋ ಕುಳಿತುಕೋ" ಎನ್ನುತ್ತ ನಾರಾಯಣ ಎಂಜಿನನ್ನು ನಡೆಸಿದ.

ಏಜೆಂಟನ ಕಪ್ಪು ಮುಖ ಇನ್ನೂ ಕಪ್ಪಾಯಿತು. ತನ್ನನ್ನು ಎದುರಿಸಿ ಇವನು ಮಾತಾಡಿ ಬಿಟ್ಟನಲ್ಲ ಎಂದು ಅವನು ಕಿಡಿಕಾರಿದ.

"ನೀನು ಎಲ್ಲಿ ಹೋಗ್ತಿ ಎಂದು ನೋಡ್ತೇನೆ" ಅವನೆಂದ. "ಸ್ಟೇಟ್‌ಮೆಂಟ್ ಕೊಡೋದಿಲ್ಲ. ಏನು ಮಾಡ್ತಿ ನೋಡೋಣ!"

"ಸ್ಟೇಟ್‌ಮೆಂಟ್ ಕೊಡದಿದ್ರೆ ಅದನ್ನು ನಿಮ್ಮ ತಲೆಗೆ ಹಚ್ಚಿಕೊಳ್ಳಿ. ನಿಮ್ಗೇನು, ಇಲ್ಲಿ ದೊಡ್ಡ ಶೋಣಪನ ಹಾಗೆ ಮೆರೆಯುವುದೊಂದೇ ಕೆಲಸ. ನಮಗೆ ದುಡಿದು ಆಯಾಸ."

"ಸಾಕು ನಿನ್ನ ಕಾನೂನು ಬೇಡ."

"ನಿಮ್ಮ ಕಾನೂನೂ ಬೇಡ, ಇದು ಬಸ್ಸೇನಾದ್ರು ನಿಮ್ದಲ್ಲ. ನೀವೇನಾದ್ರೂ ನನ್ಗೆ ಕೆಲ್ಸ ಕೊಟ್ಟವ್ರಲ್ಲ."

"ನಿನ್ನ ಮೇಲೆ ರಿಪೋರ್ಟ್ ಮಾಡ್ತೇನೆ" ಎಂದು ಅವನು ಕೊನೆಗೆ ಆರ್ಭಟಿಸಿದ.

"ಒಂದಲ್ಲಿದ್ರೆ ಹತ್ತು ರಿಪೋರ್ಟ್ ಮಾಡಿ. ನಿಮ್ಮಂಥವ್ರಿಗೆಲ್ಲ ಹೆದ್ರುವ ಕಾಲ ಹೋಗಿದೆ." ಎನ್ನುತ್ತ ನಾರಾಯಣ ಬಸ್ಸನ್ನು ನಡೆಸತೊಡಗಿದ.

ಜುವಾನ ಏಜೆಂಟನಿಂದ ಸ್ಟೇಟ್‌ಮೆಂಟನ್ನು ಪಡೆಕೊಂಡು ಓಡಿ

ಬಂದು ಬಸ್ಸನ್ನೇರಿದ. ನಾರಾಯಣ ಅವನನ್ನು ಹಿಂದೆ ತಿರುಗಿ ನೋಡಿ ನಕ್ಕ.

ಬಸ್ಸು ಮಂಗಳೂರನ್ನು ಸಕಾಲದಲ್ಲೇ ತಲುಪಿತು. ನಾರಾಯಣನ ರಜೆ ಅರ್ಜಿ ಆಗ ಅಂಗೀಕೃತವಾಗಿ ಅವನಿಗೆ ಮೂರು ದಿನ ರಜೆ ದೊರಕಿತ್ತು. ಅವನು ಮಗುವಿಗೆ ಸ್ವಲ್ಪ ತಿಂಡಿಗಳನ್ನು ಪಡೆದು, ತಾನೂ ಸ್ವಲ್ಪ ಕಾಫಿ ಕುಡಿದು ತನ್ನ ಮನೆಗೆ ಹೋದ.

ಪುಟ್ಟು ಅವನನ್ನು ಕಂಡೊಡನೆ ಅವನ ಬಳಿಗೆ ಓಡಿ ಬಂದಳು. ಅವನು ಅವಳನ್ನು ಎತ್ತಿಕೊಂಡೇ ಮನೆಯೊಳಗೆ ಹೋದ. ಅವಳು ಅವನ ಕಿಸೆಗೆ ಕೈ ಹಾಕಿ ತಿಂಡಿಗಳನ್ನು ತೆಗೆದು ತಿನ್ನ ತೊಡಗಿದಳು.

"ಕಾಫಿ ಕುಡಿದಿದ್ದೀರಾ? ಸ್ವಲ್ಪ ಕಾಫಿ ಇಡಬೇಕೆ?" ಎಂದು ರುಕ್ಕು ಒಳಗಿನಿಂದ ಕೇಳಿದಳು.

"ಬೇಕಾದ್ರೆ ಸ್ವಲ್ಪ ಇಡು. ನಾನು ಈಗ ಒಂದು ಸಲ ಕುಡಿದೆ. ಪುಟ್ಟೊ ಸ್ವಲ್ಪ ಕುಡೀತಾಳೆ".

ಹೀಗೆಂದು ಅವನು ಅಲ್ಲಿದ್ದ ಆರಾಮಕುರ್ಚಿಯಲ್ಲಿ ಕುಳಿತುಕೊಂಡು ಪುಟ್ಟುವನ್ನು ತೊಡೆಯ ಮೇಲೇರಿಸಿದ.

"ಕಾಫಿ ಕಾಫಿ" ಎಂದು ಮಗು ಅವನ ತೊಡೆಯಮೇಲೆ ನಿಂತು ಕುಣಿಯ ತೊಡಗಿತು.

ಅವನಿಗೆ ಆಗ ಮೇಲೆ ಗೋಡೆಯಲ್ಲಿ ತೂಗಾಡುತ್ತಿದ್ದ ತನ್ನ ಮಾವನ ಭಾವ ಚಿತ್ರ ಕಣ್ಣಿಗೆ ಬಿತ್ತು. ಅದರಲ್ಲಿ ಅವನು ಯುವಕನಂತೆ ತೋರುತ್ತಿದ್ದ. ಯಾವಾಗಲೂ ಅವನ ಮುಖದಲ್ಲಿದ್ದ ನಸುನಗು ಆ ಚಿತ್ರದಲ್ಲೂ ಇತ್ತು. ಆ ಚಿತ್ರದ ಇನ್ನೊಂದು ಬದಿಯಲ್ಲಿ ಮುಂಡಪ್ಪನ ಚಿತ್ರವೂ ಇತ್ತು. ನಾರಾಯಣ ಮತ್ತೆ ತನ್ನ ಚಿತ್ರವನ್ನೂ ನೋಡಿದ.

ರುಕ್ಕು ಅವನಿಗೆ ಲೋಟದಲ್ಲಿ ಕಾಫಿ ತಂದಿಟ್ಟು ಪುಟ್ಟುವನ್ನು ಅವನ ತೊಡೆಯಿಂದ ಕೆಳಗಿಳಿಸಿದಳು.

"ಕಾಫಿ ಕಾಫಿ" ಎಂದು ಪುಟ್ಟು ಬೊಬ್ಬೆಮಾಡಿದಳು.

ನಾರಾಯಣ ಅವಳನ್ನು ಬಳಿಗೆ ಎಳೆದು ,ಒಂದಿಷ್ಟು ಕಾಫಿಯನ್ನು ತನ್ನ ಲೋಟದಿಂದ ಕುಡಿಸಿ, ಆ ಬಳಿಕ ತಾನೂ ಕುಡಿದ.

ಅಷ್ಟರಲ್ಲಿ ಹೊರಗಿನಿಂದ ಯಾರೋ ಮಾತಾಡುತ್ತಿರುವ ಸದ್ದು ಕೇಳಿಸಿತು. ಯಾರೆಂದು ನೋಡಲು ಅವನು ಎದ್ದು ನಿಲ್ಲುವಾಗ ಪೋಲೀಸಿನವನೊಬ್ಬನ ತಲೆ ಅವನಿಗೆ ಕಾಣಿಸಿತು. ಕುತೂಹಲದಿಂದ ಅವನು ಹೊರಗೆ ಹೋದ.

ಅಲ್ಲಿ ಪೋಲೀಸಿನವನೊಬ್ಬನೇ ಇರಲಿಲ್ಲ. ಮತ್ತೊಬ್ಬ ಪೋಲೀಸು ಅಧಿಕಾರಿಗಳೂ ಇದ್ದರು.

ನಾರಾಯಣ ಅವರಿಬ್ಬರಿಗೂ ನಮಸ್ಕರಿಸಿ ಒಳಗಿನಿಂದ ಅವರಿಗೆ ಎರಡು ಕುರ್ಚಿಗಳನ್ನು ಕೊಂಡು ಹೋಗಿ ಇಟ್ಟ. ಅವರು ಕುಳಿತು ಕೊಂಡರು. ಅವನು ಅಂಜಿಕೆಯಲ್ಲಿ ದೂರ ನಿಂತುಕೊಂಡ.

"ನಿನ್ನ ಹೆಸರು ನಾರಾಯಣನೆಂದಲ್ಲವೆ ?" ಎಂದು ಅಧಿಕಾರಿಗಳು ಕೇಳಿದರು.

"ಹೌದು ಸ್ವಾಮಿ," ಎಂದು ಅವನು ಕಂಪಿಸುತ್ತ ಉತ್ತರಿಸಿದ.

"ನಿನ್ನ ಹೆಂಡತಿ ದೂಮನ ಮಗಳು ತಾನೆ ?"

"ಹೌದು ಸ್ವಾಮಿ."

"ನಿನ್ನ ಉದ್ಯೋಗವೇನು ?"

"ಮೋಟಾರ್ ಡ್ರೈವರ".

"ನೀನು ಲಾರಿ ಡ್ರೈವರನೇ ?"

"ಅಲ್ಲ....ಬಸ್ಸು ಡ್ರೈವರ," ನಾರಾಯಣ ಎಡವುತ್ತ ಹೇಳಿದ.

"ಈಗಲೂ ನೀನು ಕೆಲಸದಲ್ಲಿದ್ದೀಯೆ ?", ಅಧಿಕಾರಿಗಳು ಪ್ರಶ್ನಿಸು ವಾಗ ಅವನ ಮುಖವನ್ನು ಕೂಡಾ ನೋಡುತ್ತಿರಲಿಲ್ಲ.

"ಹೌದು ಸ್ವಾಮಿ. ಈಗತಾನೆ ಬಸ್ಸು ನಿಲ್ಲಿಸಿ ಬಂದೆ".

"ದೂಮ ಸತ್ತ ದಿನವೂ ನೀನು ಕೆಲಸಕ್ಕೆ ಹೋಗಿದ್ದಿಯಾ ?"

"ಹೌದು".

"ಎಲ್ಲಿಗೆ ಆ ದಿನ ಹೋಗಿದ್ದಿ ?"

"ಸೋಮೇಶ್ವರಕ್ಕೆ".

"ಯಾವಾಗ ಹಿಂದೆ ಬಂದಿ ?"

"ಸಂಜೆ ಸುಮಾರು ಆರು ಗಂಟೆಗೆ".

"ಆಮೇಲೆ ?"

"ಬಸ್ಸನ್ನು ಗ್ಯಾರೇಜಿನಲ್ಲಿಟ್ಟು ಮನೆಗೆ ಬಂದೆ".

"ನೇರವಾಗಿ ಮನೆಗೇ ಬಂದೆಯೋ ? ಅಲ್ಲ ಬೇರೆಲ್ಲಾದರೂ ಹೋದಿಯೋ ?"

"ಎಲ್ಲೂ ಹೋಗ್ಲಿಲ್ಲ. ಆದ್ರೆ....", ನಾರಾಯಣನಿಗೆ ಶಬ್ದಗಳು ಗಂಟಲಿನಿಂದ ಹೊರಡದಾದುವು. ಅವನ ಮುಖವಿಡೀ ಆಗಲೇ ಬೆವರಿ ಹೋಗಿತ್ತು. "ಅಂದು ಜೋರು ಮಳೆಯಿತ್ತು. ಬರುವಾಗ ದಾರಿಯಲ್ಲಿ ಕಾಲುಜಾರಿ ಗದ್ದೆಗೆ ಬಿದ್ದೆ. ಅಲ್ಲಿಂದ ಮೇಲೆ ಬರುವಾಗ ಹನ್ನೊಂದು ಗಂಟೆ ಕಳೆದಿತ್ತು."

"ಏನು ಗದ್ದೆಗೆ ಬಿದ್ದಿಯ ?" ಎಂದು ಅಧಿಕಾರಿಗಳು ಫಕ್ಕನೆ ಅವನ ಮುಖವನ್ನು ನೋಡಿದರು.

ಅವನ ನಾಲಿಗೆ ಕೂಡಾ ಆಗ ನಡುಗತೊಡಗಿತು. ರುಕ್ಕು ಒಳಗೆ ನಿಂತುಕೊಂಡು ಇದನ್ನೆಲ್ಲ ಕೇಳುತ್ತಿದ್ದಳು.

"ಹೌದು ಸ್ವಾಮಿ. ಇಲ್ಲೇ ಓ ಆ ಗದ್ದೆಯಲ್ಲಿ. ಕತ್ತಲಲ್ಲಿ ಅದರಿಂದ ಮೇಲೆ ಬರಲು ದಾರಿ ಸಿಗಲಿಲ್ಲ."

"ಸರಿ. ನಿನಗೆ ದೂಮ ವೀಲುಮಾಡಿಟ್ಟುದು ಆಗ ಗೊತ್ತಿತ್ತೇ?"

"ನನ್ನನ್ನೂ ಅವ್ರ ಮಗ ಮುತ್ತನನ್ನೂ ಕೆಲವು ದಿನಗಳ ಹಿಂದೆ ವಕೀಲರಲ್ಲಿಗೆ ಕರೆದುಕೊಂಡು ಹೋಗಿ ಅವ್ರಿಂದ ವೀಲನ್ನು ಓದಿಸಿದ್ರು. ಅಷ್ಟೇ ನನ್ಗೆ ಆಗ ಗೊತ್ತು."

"ಮತ್ತೆ ಅವನ್ನು ರಿಜಿಸ್ಟ್ರಿಮಾಡಿದುದು ನಿನಗೆ ಗೊತ್ತಿಲ್ಲ ?"

"ಇಲ್ಲ."

"ನಿನಗೆ, ಅಂದರೆ ನಿನ್ನ ಹೆಂಡತಿಗೆ ಅವನ ಮನೆ ಮತ್ತು ಐದು ಸಾವಿರ ರೂಪಾಯಿಗಳನ್ನು ಬಿಟ್ಟಿದ್ದಾನೆಂಬುದು ನಿನಗೆ ಅಂದು ಗೊತ್ತಿತ್ತೆ ?"

"ಅಂದು ವಕೀಲ್ರು ಹಾಗೆ ಓದಿ ಹೇಳಿದ್ರು."

"ದೊಾಮು ಸತ್ತುದು ನಿನಗೆ ಗೊತ್ತಾದುದು ಯಾವಾಗ ?"

"ನನಗೆ ಮರುದಿನ ಸಂಜೆ".

"ಅದರ ಮುಂಚೆ ಗೊತ್ತೇ ಇರಲಿಲ್ಲವೆ ?"

"ಇಲ್ಲ. ನಾನು ಬೆಳಗ್ಗೆ ಐದು ಗಂಟೆಗೇ ಇಲ್ಲಿಂದ ಹೋಗಿದ್ದೆ."

ಅಧಿಕಾರಿಗಳು ಆಗ ಪೋಲೀಸಿನವನ ಮುಖ ನೋಡಿದರು. ಅವನು ಅರ್ಥಪೂರ್ಣವಾಗಿ ಅವರನ್ನು ನೋಡಿದ.

"ಸರಿ. ನಾಳೆ ಇಲ್ಲವೇ ನಾಳದು ನೀನು ಸ್ಟೇಷನಿಗೆ ಬರಬೇಕು. ನೀನು ಈಗಲೂ ಕೆಲಸಕ್ಕೆ ಹೋಗುತ್ತೀಯಲ್ಲ ?"

"ಇಲ್ಲ ಸ್ವಾಮಿ, ನಾನು .ನಾಳೆಯಿಂದ ಮೂರು ದಿನಗಳ ರಜೆ ಪಡೆದಿದ್ದೇನೆ."

"ಹಾಗಾದರೆ ನೀನು ಮನೆಯಲ್ಲೇ ಇರುವೆಯಲ್ಲ? ಬೇಕಾದರೆ ನಾನು ನಿನಗೆ ಜನ ಕಳಿಸುತ್ತೇನೆ. ಕೂಡಲೇ ಬರಬೇಕು" ಎನ್ನುತ್ತ ಅವರು ಪೋಲೀಸಿನವನೊಡನೆ ಹೊರಟರು.

ನಾರಾಯಣ .ಅವರು ಹೋಗುತ್ತಿದ್ದ ದಾರಿಯನ್ನೇ ಮತ್ತೂ ಸ್ವಲ್ಪ ಹೊತ್ತು ನಿಂತುಕೊಂಡು ನೋಡುತ್ತಿದ್ದ.

. ೧೨

ಮರುದಿನ ಬೆಳಿಗ್ಗೆ ನಾರಾಯಣ ಏಳುವುದರೊಳಗೇ: ಮುಂಡಪ್ಪ ಅವನ ಮನೆಗೆ ಬಂದಿದ್ದ. ನಾರಾಯಣ •ಅವನು ಬಂದನೆಂದುತಿಳಿದು ಚಾಪೆಯಿಂದೆದ್ದು ಬಂದ. ಅವನು ಮುಂಡಪ್ಪನನ್ನು ನೋಡದೆ ಐದು ವರ್ಷಗಳು ಕಳೆದಿದ್ದುವು. ಈಗ ಮುಂಡಪ್ಪನ ಕೂದಲುಗಳು ಬೆಳ್ಳಗಾಗಿದ್ದುವು. ಮುಖದಲ್ಲಿ ನೆರಿಗೆಗಳು ಬಿದ್ದಿದ್ದುವು. ಹಿಂದೆ ತೆಳ್ಳಗಾಗಿದ್ದ ಅವನಿಗೆ ಈಗ ಬೊಜ್ಜು ಬಂದು ಹೊಟ್ಟೆಮುಂದಕ್ಕೆ ಉಬ್ಬಿತ್ತು. ಈಗಿನ ಅವನ ಉಡುಪುಗಳೂ ಬೇರೆಯಾಗಿದ್ದುವು. ನಸು ಹಳದಿ ಬಣ್ಣದ ಉಣ್ಣೆಯ ಸೂಟನ್ನು ಧರಿಸಿದ್ದ. ಕಾಲುಗಳಲ್ಲಿ ಹೊಳೆಯುವ ಬೂಟ್ಸುಗಳಿದ್ದುವು.: ಕುತ್ತಿಗೆಯಲ್ಲಿ ಬಣ್ಣದ "ಟೈ" ಇತ್ತು.

ಉಣ್ಣೆಯ ಹ್ಯಾಟನ್ನು ಒಂದು ಕೈಯ್ಯಲ್ಲಿ ಹಿಡಿದುಕೊಂಡಿದ್ದ. ಮತ್ತೊಂದು ಕೈಯ್ಯಲ್ಲಿ ಒಂದು ಸುಂದರವಾದ ಊರುಗೋಲಿತ್ತು.

"ಏ ಇಲ್ಲಿ ಬಾರೋ" ಎಂದು ಮುಂಡಪ್ಪ ಪುಟ್ಟುವನ್ನು ಕರೆದ. ಮತ್ತೆ ಅವನು ಪ್ರವೀಣನನ್ನುದ್ದೇಶಿಸಿ "ನಿನ್ನ ಹೆಸ್ರೇನೋ ?" ಎಂದು ಕೇಳಿದ.

"ಪ್ರವೀಣ" ಎಂದು ಪ್ರವೀಣ ಉತ್ತರಿಸಿದ.

"ಒಹ್ ! ಒಳ್ಳೆಯ ಹೆಸ್ರು. ಅವಳನ್ನು ಇಲ್ಲಿತಾ. ಅವಳ ಹೆಸರೇನು ?"

"ಪ್ರೇಮ. ಆದ್ರೆ ನಾವು ಕರೆಯೋದು ಪುಟ್ಟು ಎಂದು."

"ಪುಟ್ಟೊ ಇಲ್ಲಿ ಬಾ" ಎಂದು ಮುಂಡಪ್ಪ ಅವಳನ್ನು ಕರೆದ. ಅವಳು ನಾಚಿಕೆಯಲ್ಲಿ ತಲೆತಗ್ಗಿಸಿದಳು.

"ಏ ಬಾರೇ ! ಇಗೋ ನಿನ್ಗೆ ತಿಂಡಿ" ಎಂದು ಅವನು ಜೇಬಿನಿಂದ ಒಂದು ಕಾಗದದ ಕಟ್ಟನ್ನು ತೋರಿಸಿದ.

ಆದರೂ ಅವಳು ಅವನ ಬಳಿಗೆ ಹೋಗಲಿಲ್ಲ.

ಆಗ ನಾರಾಯಣ ಒಳಗೆ ಬಂದು ಕಾಫಿಯ ಲೋಟವನ್ನು ತೆಗೆದುಕೊಂಡ. ಪುಟ್ಟು ಅವನಿದ್ದಲ್ಲಿಗೆ ಬಂದಳು. ಅವನು ಅವಳನ್ನು ಎತ್ತಿಕೊಂಡು ಅವಳಿಗೂ ಸ್ವಲ್ಪ ಕಾಫಿ ಕುಡಿಸಿದ.

"ನಿನ್ನೆ ರಾತ್ರಿ ಮತ್ತೆಲ್ಲಿದ್ದಿರಿ ಅಣ್ಣಾ ? ನನ್ಗೆ ತಿಳ್ದಿದ್ರೆ ನಾ ಬಸ್ ಸ್ಟಾಂಡಿಗೆ ಬರ್ತಿದ್ದೆನಲ್ಲ !" ಎಂದು ಅವನು ಮತ್ತೆ ಮುಂಡಪ್ಪನನ್ನುದ್ದೇಶಿಸಿ ಹೇಳಿದ.

"ನಿನ್ನೆ ಅಲ್ಲೊಂದು ಹೋಟ್ಲಲ್ಲಿ ಉಳ್ಕೊಂಡೆ. ಊಟ ಎಲ್ಲೂ ಸಿಕ್ಲಿಲ್ಲ. ನನ್ಗೆ ಮುತ್ತನ ವಯರ್ ಮುಟ್ಟಿದಕೂಡ್ಲೆ ನಾನು ಬೊಂಬಾಯಿಗೆ ವಿಮಾನದಲ್ಲಿ ಬಂದೆ. ಅಲ್ಲಿಂದೀಚೆ ವಿಮಾನ ಸರ್ವಿಸು ಮಳೆಯಿಂದಾಗಿ ನಿಂತಿದೆಯೆಂದರು. ಹಾಗೆ ರೈಲು ಹತ್ತಿದೆ. ಆತನ್ಕ ನಾನು ಇಲ್ಲಿಗೆ ಎಂದು ಬರುತ್ತೇನೆಂದು ನನ್ಗೇ ಗೊತ್ತಿರಲಿಲ್ಲ."

"ಮನೆಗೆ ನೀವು ಹೋಗ್ಲಿಲ್ವೆ ?" ಎಂದು ನಾರಾಯಣ ಕೇಳಿದ.

"ಇಲ್ಲ. ಒಟ್ಟಿಗೆ ಹೋಗೋಣವೆಂದು ಇಲ್ಲೇ ಬಂದೆ. ನೀನೆ

ಲ್ಲಾದ್ರೂ ಕೆಲ್ಸಕ್ಕೆ ಹೋಗಿರುವೆಯೋ ಎಂದು ಸಂಶಯವಾಯಿತು."

"ನಾನು ನಿನ್ನೆ ರಜೆ ಪಡೆದಿದ್ದೇನೆ. ಸದ್ಯ ಮೂರುದಿನ ರಜೆ ಕೊಟ್ಟಿದ್ದಾರೆ. ಅದು ಮುಗಿದಮೇಲೆ ಪುನಃ ರಜೆ ಮುಂದರ್ಸಬೇಕು."

"ಈಗ ರಜೆ ಕೊಡಲು ಹೆಚ್ಚು ಗಲಾಟೆ ಮಾಡ್ತಾರೆಯೇ ?"

"ಸ್ವಲ್ಪ ಪಿರಿ ಪಿರಿ ಇದ್ದೇ ಇದೆಯಲ್ಲ? ಆದ್ರೆ ಈಗ ತುಂಬಾ ಸ್ಟ್ರಿಕ್ಟ್ ಆಗಿದ್ದಾರೆ. ಒಂದಿಷ್ಟು ಹೆಚ್ಚುಕಡಿಮೆಯಾದ್ರೆ ಟ್ರಾನ್ಸ್‌ಫರ್, ಫೈನ್, ಸಸ್ಪೆಂಡ್ ಅಲ್ಲದೆ ಡಿಸ್ಮಿಸ್ ಕೂಡಾ ಮಾಡಿಬಿಡ್ತಾರೆ ಅಣ್ಣ."

"ನೀನು ಇನ್ನೂ ಮುಂಚಿನ ಲೈನಿನಲ್ಲಿಯೇ ಇದ್ದೀಯಲ್ಲ?"

"ಹೌದು. ಆದ್ರೆ ಕೆಲವು ಸಲ ಬದ್ಲಾಗ್ತದೆ."

"ನಮ್ಮ ಸಿರಿ, ಸುವರ್ಣ, ಕಾಂತಪ್ಪ, ತನಿಯ ಇವ್ರೆಲ್ಲ ಹೇಗಿದ್ದಾರೆ ?"

"ಸಿರಿ ಸತ್ತುಹೋದ. ಕಾಂತಪ್ಪ ಲಾರಿಯಲ್ಲಿದ್ದಾನೆ. ತನಿಯ ಕೆಲಸದಲ್ಲಿಲ್ಲ. ಸುವರ್ಣ ಏನೋ ಇನ್ನೂ ಹೊಡೆದಾಡ್ತಿದ್ದಾನೆ?"

"ಆ ಘಟ್ಟದ ಮುದ್ಕ ಇದ್ದಾನೆಯೇ ಈಗ್ಲೂ?"

"ಇದ್ದಾನಪ್ಪ ! ಒಮ್ಮೆ ಲಾರಿ ಬಿಡ್ತಾನೆ. ಇನ್ನೊಮ್ಮೆ ಕಾರು ನಡೆಸ್ತಾನೆ. ಎಲ್ಲಿ ಕೆಲ್ಸವೆಂದು ಅವ್ನಿಗೆ ಖಂಡಿತ ಇಲ್ಲ."

"ಅವ್ನಿಗೆ ಕಣ್ಣು ಕಾಣ್ತದೆಯೆ ?"

"ಓಹ್ ! ಕಣ್ಣೇ ? ಕನ್ನಡಕ ಕೂಡಾ ಅವನು ಇಡೋದಿಲ್ಲ !"

"ಚಿಂತಿಲ್ಲ ಅವನು."

"ನಿನ್ನ ತಂದೆ ತಾಯಿ ಹೇಗಿದ್ದಾರೆ ? ಅವರನ್ನು ನೋಡಿದ್ದಿಯಾ ಇತ್ತೀಚೆ ?"

"ಇಲ್ಲ. ಅಲ್ಲಿಗೆ ನಾ ಹೋಗ್ದೆ ಆರು ತಿಂಗ್ಳು ಕಳೆಯಿತು. ಆದ್ರೆ ಮೊನ್ನೆ ತಂದೆ ನೋಡ್ಲಿಕ್ಕೆ ಸಿಕ್ಕಿದ್ರು."

"ಹುಂ. ನೀನೂ ಒಬ್ಬ ಮನುಷ್ಯ !" ಎಂದು ಮುಂಡಪ್ಪ ದೀರ್ಘ ಶ್ವಾಸ ಬಿಟ್ಟು, ಕಿಸೆಯಿಂದ ಒಂದು ಚುಟ್ಟಾ ತೆಗೆದು ಅದಕ್ಕೆ ಬೆಂಕಿ ಕೊಟ್ಟ.

ನಾರಾಯಣನಿಗೆ ಮುಂಡಪ್ಪನ ಈಮಾತು ಚುಚ್ಚಿದಂತಾಯಿತು.

ಇವನು ಹೀಗೆ ತನ್ನನ್ನೇಕೆ ಹಳಿಯಬೇಕೆಂದು ಅವನಿಗೆ ಗೊತ್ತಾಗಲಿಲ್ಲ. ಬಹುಶಃ ಇವನಿಗೆ ಮುತ್ತ ಕಳಿಸಿದ ತಂತಿಯಲ್ಲಿ ತನ್ನಕುರಿತು ತಿಳಿಸಿರಲೂ ಸಾಕು ಎಂದು ಅವನು ಗ್ರಹಿಸಿದ. ಅದೂ ಮುಂಡಪ್ಪನ ದಪ್ಪವಾದ ಚುರುಟಿನಿಂದ ಏಳುತ್ತಿದ್ದ ಹೊಗೆ ಮತ್ತೂ ಅದರ ವಾಸನೆ ಅವನ ಎದೆಯನ್ನು ನಡುಗಿಸುತ್ತಿದ್ದುವು. ಅವನು ಮುಂಡಪ್ಪನ ಮುಖದ ಗಂಭೀರತೆಯನ್ನು ದಿಟ್ಟಿಸಿದ.

"ಅಪ್ಪ ತೀರಿಕೊಂಡ ದಿನ ನೀನು ಇಲ್ಲಿ ಇರಲಿಲ್ಲವೇ ?" ಎಂದು ಮುಂಡಪ್ಪ ಬಾಯಿಯಿಂದ ಹೊಗೆಯ ಮುದ್ದೆಯನ್ನು ಕಾರುತ್ತ ಕೇಳಿದ.

"ಇದ್ದೆ. ಆದ್ರೆ ನನ್ಗೆ ಗೊತ್ತಾದುದು ಮರುದಿನ" ಎಂದನವ ತನ್ನ ಮನಸ್ಸಿನ ಕಳವಳವನ್ನು ಬದಿಗೊತ್ತುತ್ತ.

ಆಗ ರುಕ್ಕುವೂ ಹೊರಗೆ ಬಂದಳು. ಅವಳ ಕಣ್ಣುಗಳಲ್ಲಿ ನೀರು ತುಂಬಿತ್ತು. ಅವಳು ನಾರಾಯಣನನ್ನೇ ನೋಡುತ್ತಿದ್ದಳು.

"ಅಪ್ಪನಿಗೇನು ಹುಶಾರಿರಲಿಲ್ವೇ ?" ಎಂದು ಮುಂಡಪ್ಪ ಕೇಳಿದ.

"ಸ್ವಲ್ಪ ಕ್ಯಾಲೆಯೂ ಇತ್ತು."

"ಅದ್ರಿಂದ್ಲೇ ಸತ್ತುದೆ ?"

ನಾರಾಯಣ ರುಕ್ಕುವಿನ ಮುಖವನ್ನು ನೋಡಿದ. ಮುಂಡಪ್ಪನೂ ಅವಳನ್ನೇ ನೋಡಿದ. ಅವಳು ಬಿಕ್ಕಿ ಬಿಕ್ಕಿ ಅಳ ತೊಡಗಿದಳು. ನಾರಾಯಣನ ಕಣ್ಣಿನಲ್ಲೂ ಆಗ ನೀರು ಉಕ್ಕಿಬಂತು.

"ಏನೋ ಮೋಟಾರಿನಡಿಗೆ ಬಿದ್ದರಂತೆ........" ಎಂದು ನಾರಾಯಣ ತಡವರಿಸುತ್ತ ಹೇಳಿದ."

"ಓಹೋ! ಮೋಟಾರಿನಡಿಗೆ ಬಿದ್ದುದೇ ? ನನ್ಗೆ ಒಂದೂ ತಿಳಿಲಿಲ್ಲ. ಸರಿ, ನಾವು ಮುತ್ತನಲ್ಲಿಗೆ ಹೋಗೋಣ" ಎಂದು ಅವನು ಎದ್ದು ತಲೆಗೆ ಹ್ಯಾಟನ್ನಿಟ್ಟ."

ನಾರಾಯಣನೂ ಅಂಗಿ ಹಾಕಿದ.

"ಊಟಕ್ಕೆ ಬರುತ್ತೇನೆ ರುಕ್ಕು" ಎಂದು ಮುಂಡಪ್ಪ ತಂಗಿಯೊಡನೆ ಹೇಳುತ್ತ ಹೊರನಡೆದ.

ನಾರಾಯಣ ಅವನನ್ನು ಹಿಂಬಾಲಿಸಿದ.

ಅವರು ಮುತ್ತನ ಮನೆಗೆ ಹೋಗುವಾಗ ಮುತ್ತ ಅಂಗಡಿಗೆ ಹೊರಡುತ್ತಿದ್ದ. ಅವರನ್ನು ಕಂಡು ಅವನು ಒಳಗೆ ಹೋದ.

ಮುಂಡಪ್ಪ ಮುತ್ತನೊಡನೆ ಎಲ್ಲವನ್ನೂ ವಿಚಾರಿಸಿದ. ಮುತ್ತ ತನ್ನ ತಂದೆ ಮೋಟರ್ ಅಪಘಾತಕ್ಕೀಡಾದುದನ್ನೂ, ಅಲ್ಲಿಂದ ಯಾರೋ ಅವನನ್ನು ಆಸ್ಪತ್ರೆಗೆ ಕಾರಿನಲ್ಲಿ ಹಾಕಿಕೊಂಡು ಹೋದುದನ್ನೂ ಅಲ್ಲಿ ಎರಡು ಗಂಟೆಗಳ ನಂತರ ಮೃತಪಟ್ಟುದನ್ನೂ, ತನಗೆ ಅಂದು ಬೆಳಗಿನ ಜಾವ ವರ್ತಮಾನವಾದುದನ್ನೂ, ಅಣ್ಣನಿಗೆ ವಿವರಿಸಿದ. ನಾರಾಯಣ ನಿಗೂ ಈ ಸಂಗತಿಗಳೆಲ್ಲ ಗೊತ್ತಿರಲಿಲ್ಲ. ದೂಮ ಅಪಘಾತಕ್ಕೀಡಾ ದೊಡನೆಯೇ ಮುತ್ತನಿಗೆ ತಿಳಿದು ಅವನನ್ನು ಆಸ್ಪತ್ರೆಗೆ ಅವನೇ ಸಾಗಿ ಸಿರಬೇಕೆಂದು ಅವನು ಭಾವಿಸಿದ್ದ. ಅಲ್ಲಿ ಬಹುಶಃ ಮುತ್ತನಿಗೆ ಅವನು ಎಲ್ಲವನ್ನೂ ಹೇಳಿರಲೂ ಬಹುದೆಂದು ಅವನು ಹೆದರಿದ್ದ. ಈಗ ಮುತ್ತ ನಿಗೂ ಅವನು ಮರಣಪಟ್ಟ ಬಳಿಕವೇ ಸುದ್ದಿ ಸಿಕ್ಕಿದ್ದೆಂದು ಕೇಳಿ ನಾರಾ ಯಣನಿಗೆ ತುಸು ಸಂತೋಷವೇ ಆಯಿತು.

"ಅಪ್ಪ ಏನಾದ್ರೂ ವಾಜ್ಮೂಲ ಕೊಟ್ಟಿದ್ರೆ, ಆಸ್ಪತ್ರೆಯಲ್ಲಿ ?" ಎಂದು ಮುಂಡಪ್ಪ ಪ್ರಶ್ನಿಸಿದ.

"ನಂಗೊತ್ತಿರುವ ಮಟ್ಟಿಗೆ ಇಲ್ಲವೆಂದು ತೋರುತ್ತದೆ," ಎಂದು ಮುತ್ತ ಹೇಳಿದ. "ಯಾವುದನ್ನೂ ಪೋಲೀಸರು ಈಗ ಹೇಳೋದಿಲ್ಲ. ಎಲ್ಲವನ್ನೂ ಗುಟ್ಟಿನಲ್ಲಿಟ್ಟಿದ್ದಾರೆ ಅವರು."

"ಯಾರನ್ನಾದರೂ ಹಿಡಿದಿದ್ದಾರೆಯೆ ?" ಎಂದು ಮುಂಡಪ್ಪ ಕೂತೂಹಲದಲ್ಲಿ ಕೇಳಿದ.

"ಏನೋ ನಾಲ್ಕೈದು ಮಂದಿ ಡ್ರೈವರನ್ನು ಕೋಣೆಯಲ್ಲಿ ಹಾಕಿ ದ್ದಾರಂತೆ. ನಿಮ್ಮಲ್ಲಿ ಪೋಲೀಸರು ಬಂದಿದ್ದರೆಂದು ತೋರುತ್ತದಲ್ಲವೇ ಭಾವಯ್ಯ ?" ಎಂದು ಮುತ್ತ ನಾರಾಯಣನಿದ್ದ ಕಡೆಗೆ ತಿರುಗಿದ.

"ಹೌದು " ನಾರಾಯಣನೆಂದ.

"ನಿನ್ನೆಯಿಂದ ಅವರು ಏನೋ ವಿಚಿತ್ರವಾದ ವಿಚಾರಣೆ ಆರಂಭಿ ಸಿದ್ದಾರೆ. ಅಪ್ಪ ವೀಲನ್ನು ರಿಜಿಸ್ಟ್ರಿ ಮಾಡಿದ್ದಾರಂತೆ. ಅದರ ನಕಲು ಪೋಲೀಸರಿಗೆ ಸಿಕ್ಕಿದೆಯಂತೆ."

"ಒಹೋ! ಅಪ್ಪ ಅದನ್ನೂ ಮಾಡಿದ್ದರೋ?".

ನಾರಾಯಣನಿಗೆ ಅಲ್ಲಿಂದೊಮ್ಮೆ ಹೊರಟರೆ ಸಾಕೆಂದು ತೋರು ತ್ತಿತ್ತು. ಅವನ ಭಾವನೆಗಳು ಕೆದರಿದ್ದವು. ಇನ್ನು ತಾನು ಏನು ಮಾಡುವುದೆಂದು ಅವನು ಯೋಚಿಸುತ್ತಿದ್ದ. ಇವರೆಲ್ಲ ಈ ವಿಚಾರ ಗಳನ್ನು ಏಕಾಗಿ ಚರ್ಚಿಸ ಬೇಕೆಂಬುದು ಅವನಿಗೆ ತಿಳಿಯದಾಯಿತು.

"ಹೌದು ಅವರು ಸಾಯುವ ಮುಂಚಿನ ದಿನವೇ ರಿಜಿಸ್ಟ್ರಿ ಮಾಡಿ ಸಿದ್ದರಂತೆ."

"ನಿಮ್ಗೆ ಯಾರಿಗೂ ಗೊತ್ತಿಲ್ಲದೆಯೆ ?"

"ನನ್ನನ್ನು ಭಾವನನ್ನು ಕೆಲವು ದಿನಗಳ ಹಿಂದೆ ವಕೀಲರಲ್ಲಿಗೆ ಕರೆದುಕೊಂಡು ಹೋಗಿದ್ದರು. ಅಲ್ಲಿ ನಮಗೆ ವಕೀಲರು ಅದನ್ನು ಓದಿ ಹೇಳಿದ್ರು."."

"ಅದ್ರಲ್ಲಿ ಏನೆಂದಿತ್ತು ?"

"ನಿಮ್ಗೆ ಎರಡು ಸಾವಿರ ರೂಪಾಯಿ, ರುಕ್ಕುವಿಗೆ ಮನೆ ಮತ್ತು ಐದು ಸಾವಿರ ರೂಪಾಯಿ, ನನಗೆ ಅಂಗಡಿ ಎಂದಿತ್ತು."

"ಪೋಲೀಸರಿಗೇನು ಅದ್ರಲ್ಲಿ ?"

"ಏನೋ, ಅವ್ರು ಹೇಳ್ಳೋದಿಲ್ಲ. ನಿನ್ನೆ ಮಧ್ಯಾಹ್ನ ಬಂದು ನನ್ನನ್ನು ವಿಚಾರಿಸಿಕೊಂಡು ಹೋದ್ರು."

"ನೀನು ಎಲ್ಲವನ್ನು ಹೇಳಿದೆಯಾ ?"

"ಹೌದು. ಈಗ ಹೇಳಿದ್ದನ್ನೆಲ್ಲ ಹೇಳಿದೆ. ಅವರು ಸ್ವಲ್ಪ ಸ್ವಲ್ಪ ಬರೆದುಕೊಂಡರು. ಆಮೇಲೆ ಬಹಶಃ ಭಾವನಲ್ಲಿಗೆ ಹೋದರೆಂದು ತೋರುತ್ತದೆ, ಅಲ್ಲವೇ ಭಾವ ?"

ನಾರಾಯಣನಿಗೆ ಈ ಪ್ರಶ್ನೆಯನ್ನು ಕೇಳುತ್ತಲೇ ಕಾಲು ನಡುಗ ತೊಡಗಿತು. ಕಣ್ಣಿಗೆ ಏನೋ ಹಳದಿ ಬಣ್ಣದ ಚೂರ್ಣವನ್ನು ಎಸೆ ದಂತಾಯಿತು. ಅವನು ಅಲ್ಲೇ ಧೊಪ್ಪನೆ ಬಿದ್ದು ಬಿಟ್ಟ.

"ಏನಾಯಿತು ? ಅವರಿಗೆ ಏನಾಯಿತು ?" ಎನ್ನುತ್ತ ಮುತ್ತ ಓಡಿಹೋಗಿ ಅವನನ್ನು ಎಬ್ಬಿಸಲಿಕ್ಕೆ ಯತ್ನಿಸಿದ.

ಮುಂಡಪ್ಪ ತನ್ನ ಕಿಸೆಯಿಂದ ವಾಸನೆಯ ಲವಣದ ಸೀಸೆಯನ್ನು

ತೆಗೆದು ನಾರಾಯಣನ ಮೂಗಿನ ಬಳಿ ಹಿಡಿದ. ಅವನ ಕೈಕಾಲು ಗಳನ್ನು ತಿಕ್ಕಿದ. ಮುತ್ತ ಒಳಗಿಂದ ಒಂದು ತಂಬಿಗೆ ನೀರನ್ನು ತಂದು ನಾರಾಯಣನ ಮೇಲೆ ಚಿಮುಕಿಸಿದ. ಆದರೆ ನಾರಾಯಣ ಎಚ್ಚರ ವಾಗಲಿಲ್ಲ. ಅವನು ಗಟ್ಟಿಯಾಗಿ ಶ್ವಾಸವನ್ನು ಬಿಡುವುದು ಮಾತ್ರ ಅವರಿಗೆ ಕೇಳುತ್ತಿತ್ತು.

"ಒಂದು ಟ್ಯಾಕ್ಸಿ ತಾ. ಒಬ್ಬ ಡಾಕ್ಟರರನ್ನೂ ಬರಹೇಳು. ಏನೋ ಸಮಯಕ್ಕೆ ಸರಿಯಾಗಿ ಅನ್ನವಿಲ್ಲದೆ ತಿರುಗಾಡಿದುದರಿಂದ ಅವನಿಗೆ ವೀಕ್ನೆಸ್ ಬಂದಿರ್ಬೇಕು. ಇಗೋ ನಿನ್ನೊಡನೆ ಹಣವಿಲ್ಲದಿದ್ರೆ" ಎನ್ನುತ್ತ ಮುಂಡಪ್ಪ ಹತ್ತು ರೂಪಾಯಿಯ ಒಂದು ನೋಟನ್ನು ಮುತ್ತನಿಗಿತ್ತ.

ಮುತ್ತ ಹೋಗಿ ಸ್ವಲ್ಪ ಹೊತ್ತಿನಲ್ಲೆ ಒಂದು ಟ್ಯಾಕ್ಸಿಯನ್ನು ತಂದ. ಅದರಲ್ಲಿ ಒಬ್ಬ ಡಾಕ್ಟರರೂ ಇದ್ದರು. ಅವರು ನಾರಾಯಣನ ನರಗಳನ್ನು ಪರೀಕ್ಷಿಸಿ ಏನೂ ಗಾಬರಿಯಿಲ್ಲವೆಂದರು.

"ನಾವು ಮಾತಾಡುತ್ತಿದ್ದಂತೆಯೇ ಅವನು ಬಿದ್ದು ಬಿಟ್ಟ," ಎಂದು ಮುಂಡಪ್ಪ ಹೇಳಿದ.

"ಏನೋ ನರ್ವಸ್ ವೀಕ್ನೆಸ್. ಯಾವ ಉದ್ಯೋಗದಲ್ಲಿದ್ದಾನೆ ಇವನು ?"

"ಬಸ್ಸಿನ ಡ್ರೈವರ."

"ಏನೋ ತಲೆ ತಿರುಗಿದಂತಾಗಿರಬೇಕು, ಅಷ್ಟೆ. ನಾಡಿಗಳೆಲ್ಲ ಸರಿಯಾಗಿ ನಡೆಯುತ್ತಿವೆ. ಪಲ್ಸ್ ಸರಿಯಾಗಿದೆ. ಎದೆಯ ಬಡಿತ ದಲ್ಲೂ ಏನೂ ಹೆಚ್ಚುಕಡಿಮೆಯಿಲ್ಲ. ಆದಷ್ಟು ಗಾಳಿ ಬರುವಲ್ಲಿ ಅವ ನನ್ನು ಮಲಗಿಸಿ."

"ಅವನ ಮನೆಗೆ ಕರೆದುಕೊಂಡು ನಾವು ಟ್ಯಾಕ್ಸಿಯಲ್ಲಿ ಹೋಗ ಬಹುದೋ ?"

"ಓಹ್ ! ಅದಕ್ಕೇನಡ್ಡಿ ? ಆದರೆ ದೇಹವನ್ನು ಹೆಚ್ಚು ಅಲುಗಾಡಿ ಸಬೇಡಿ," ಎಂದು ಡಾಕ್ಟರರು ಫೀಸನ್ನು ತೆಗೆದುಕೊಂಡು ಹೋದರು.

ಮುಂಡಪ್ಪನೂ ಮುತ್ತನೂ ನಾರಾಯಣನನ್ನೆತ್ತಿ ಟ್ಯಾಕ್ಸಿಯಲ್ಲಿ ಮಲಗಿಸಿದರು. ಟ್ಯಾಕ್ಸಿಯವನಿಗೆ ತುಸು ಹೆದರಿಕೆಯಾಯಿತು.

"ಏನೂ ಗಾಬ್ರಿಯಿಲ್ಲ. ಅವನು ಸತ್ತಿಲ್ಲ" ಎಂದು ಮುಂಡಪ್ಪ ಅವನಿಗೆ ಧೈರ್ಯ ಹೇಳಿದ.

"ಹಾಗಲ್ಲ ಸ್ವಾಮಿ, ಎಲ್ಲಾದ್ರೂ ಸತ್ಬಿಟ್ರೆ ನನ್ನ ಟ್ಯಾಕ್ಸಿಯ ಭವಿಷ್ಯ ಮುಗಿದಂತೆಯೇ ಸರಿ", ಎಂದನವ ದೈನ್ಯದಿಂದ.

"ನೀನೇನೂ ಹೆದರ್ಬೇಡ" ಮುಂಡಪ್ಪನೆಂದ. "ಈಗ ಡಾಕ್ಟ್ರು ಪರೀಕ್ಷೆ ಮಾಡಿದ್ರಲ್ಲ? ಇಲ್ಲೇ ಒಂದು ಮೈಲು ದೂರದಲ್ಲೇ ಅವನ ಮನೆ ಇದೆ. ಅಲ್ಲಿಗೆ ಕೊಂಡುಹೋದರಾಯಿತು."

ಟ್ಯಾಕ್ಸಿಯವ ನಾರಾಯಣನ ಮುಖ ನೋಡಿದ, ಅವನಿಗೆ ನಾರಾಯಣನ ಗುರುತು ಸಿಕ್ಕಿತು.

"ಹ್ಹೊ; ಇದು ನಮ್ಮ ನಾರಾಯಣ! ನಿನ್ನೆ ಬಸ್ಸು ಬಿಡುತ್ತಿದ್ದ! ಇವತ್ತೇನಾಯಿತು ಇವನಿಗೆ!" ಎಂದು ಚೋದ್ಯದಲ್ಲಿ ಹೇಳಿದ.

"ಏನೋ! ನಾವಿಬ್ರೂ ಇಲ್ಲಿಗೆ ಒಟ್ಟಿಗೆ ಬಂದೆವು. ಇಲ್ಲಿ ಮಾತಾಡ್ತಿದ್ದೆವು. ಇವನು ಅವನ ಭಾವ. ನಾನು ಇವನ ಅಣ್ಣ. "ನಾನೂ ಹಿಂದೆ ಮೋಟರು ಬಿಡುತ್ತಿದ್ದೆ."

"ಸರಿ" ಟ್ಯಾಕ್ಸಿಯವ ಎಂಜಿನನ್ನು ಸ್ಟಾರ್ಟ್ ಮಾಡಿದ. „ನೀವೂ ಬರುವವರಲ್ಲವೇ? ಬೇಗ ಹತ್ತಿ"

ಮುಂಡಪ್ಪ ನಾರಾಯಣನ ತಲೆಯ ಬಳಿ ಕುಳಿತ. ಮುತ್ತ ಡ್ರೈವರನ ಹತ್ತಿರ ಕುಳಿತ.

"ನಿಮ್ಮ ತಂದೆಯೇ ಮೊನ್ನೆ ಸತ್ತದ್ದಲ್ಲವೇ?" ಎಂದು ಟ್ಯಾಕ್ಸಿ ಡ್ರೈವರ ಕೇಳಿದ. "ಏನೋ ಪೋಲೀಸಿನವರು ನಮ್ಮನ್ನೆಲ್ಲ ವಿಚಾರಿಸ್ತಿದ್ದಾರೆ. ಒಬ್ಬಿಬ್ಬರಿಗೆ ಪೆಟ್ಟು ಬಿತ್ತು."

"ಒಹ್ಹೊ!" ಎಂದು ಮುಂಡಪ್ಪ ತಲೆಯಲ್ಲಾಡಿಸಿದ.

"ಪೋಲೀಸಿನವರಿಗೆ ಈಗ ಇನ್ನೊಬ್ಬ ಡ್ರೈವರನಮೇಲೆ ಸಂಶಯ ಬಂದಿದೆಯಂತೆ. ಅವನನ್ನು ಹುಡುಕುತ್ತಿದ್ದಾರೆ. ಆದ್ರೆ ನಿಮ್ಮ ತಂದೆ ಸಾಯುವಾಗ ನಾರಾಯಣನಿಗೆ ಎಲ್ಲವನ್ನು ಬರೆದಿಟ್ಟಿದ್ದಾರಂತೆ ಅಲ್ಲವೆ?"

"ಹೌದು. ಎಲ್ಲವನ್ನೂ ಅಲ್ಲ. ಅವನ ಹೆಂಡ್ತಿಯ ಹೆಸರಲ್ಲಿ."

"ಪೋಲೀಸರಿಗೆ ಇವನ ಮೇಲೂ ಸ್ವಲ್ಪ ಸಂಶಯವಿದೆಯೆಂದು ತೋರುತ್ತದೆ. ಹಾಗೆಂದು ಗಾಳಿವರ್ತಮಾನವಿದೆ."

"ಅಂದ್ರೆ ?...." ಮುಂಡಪ್ಪನೂ ಮುತ್ತನೂ ಏಕಕಾಲದಲ್ಲಿ ಕೇಳಿದರು.

"ನಾರಾಯಣ ಆ ದಿನ ಬಸ್ಸನ್ನು ನಿಮ್ಮ ತಂದೆ ಸತ್ತವೇಳೆಯಲ್ಲಿ ಗ್ಯಾರೇಜಿಗೆ ಕೊಂಡು ಹೋಗುತ್ತಿದ್ದನಂತೆ. ಆದ್ದರಿಂದ ಅವರಿಗೆ ಸಂಶಯ ಬರಲಿಕ್ಕೆ ಕಾರಣ."

"ಅಂದ್ರೆ ನಾರಾಯಣನ ಬಸ್ಸಿನ ಅಡಿಗೇ ಅಪ್ಪ ಬಿದ್ದು ಸತ್ತರೆಂದು ಹೇಳ್ತಾರೆಯೆ ?"

"ಇಲ್ಲ. ಯಾರೂ ಅದನ್ನು ನೋಡಿದವರಿಲ್ಲ. ಆದ್ರೆ ನಿಮ್ಮ ತಂದೆ ತನ್ನ ಮರಣಾನಂತರ ತನ್ನ ಸಂಪತ್ತೆಲ್ಲವೂ ನಾರಾಯಣನ ಹೆಂಡತಿಗೆ ಸಿಗಬೇಕೆಂದು ದಾಖಲೆ ಮಾಡಿದ್ರಿಂದ, ನಾರಾಯಣ ಬೇಕು ಬೇಕೆಂದೇ ಅವರನ್ನು ಕೊಂದಿರಬಹುದೆಂದು ಪೋಲೀಸರು ಊಹಿಸಿದ್ದಾರಂತೆ. ಅವರು ಈಗಾಗಲೇ ಆ ಬಸ್ಸನ್ನು ತನಿಖೆ ಮಾಡಿ ಆಗಿದೆ. ಎಲ್ಲೋ ಅದರಲ್ಲಿ ರಕ್ತದ ಕಲೆಗಳೂ ಕಾಣಸಿಕ್ಕಿದುವಂತೆ."

"ಛೆ ! ಭಾವಯ್ಯ ಹಾಗೆ ಮಾಡಿರ್ಲಿಕ್ಕಿಲ್ಲಪ್ಪ !" ಎಂದು ಮುತ್ತ ಉದ್ಗರಿಸಿದ.

"ನಾರಾಯಣನದ್ದು ನನ್ಗೆ ಗೊತ್ತಿಲ್ವೆ?" ಟ್ಯಾಕ್ಸಿಯವನೆಂದ. ಚಿನ್ನದಂಥ ಮನುಷ್ಯನವ. ಯಾವ ಒಂದು ವಂಚನೆಯೂ ಅವನಿಂದಾಗದು. ಇತರರಿಗಾಗಿ ಪ್ರಾಣಕೂಡ ಕೊಡಲು ಅವನು ತಯಾರಿರುವವ. ನಾನು ಈಗ ಹತ್ತಿಪ್ಪತ್ತು ವರ್ಷಗಳಿಂದ ಅವನನ್ನು ದಿನಾ ನೋಡುತ್ತಿಲ್ವೇ ? ಆದ್ರೆ ಈ ಆಧಾರಗಳೆಲ್ಲ ಅವನ ವಿರುದ್ಧ ನಿಂತಿವೆ. ಅಷ್ಟೆ."

ಮುಂಡಪ್ಪ ನಿಟ್ಟುಸಿರನ್ನು ಬಿಟ್ಟ.

ನಾರಾಯಣನ ಮನೆ ಬಂತು. ಅಣ್ಣ ತಮ್ಮಂದಿರಿಬ್ಬರೂ ಅವನನ್ನು ಮನೆಯೊಳಗೆ ಎತ್ತಿಕೊಂಡು ಹೋದರು. ಟ್ಯಾಕ್ಸಿಯವನೂ ಅವರೊಡನೆ ಒಳಗೆ ಬಂದ.

ಮುತ್ತ ಅವನಿಗೆ ಹಣವನ್ನಿತ್ತ.

"ಛೆ! ಇದು ಬೇಡಪ್ಪ! ನನಗೆ ಅವನು ಮಾಡಿದ ಉಪಕಾರ ಗಳೆಷ್ಟು! ಒಂದೆರಡು ವೈಲುಗಳಿಗಾಗಿ ನಾನು ಅವನ ಬಗ್ಗೆ ಬಾಡಿಗೆ ತೆಗೆದುಕೊಳ್ಳುವನೇ?" ಎಂದು ಟ್ಯಾಕ್ಸಿಯುವ ಹಣವನ್ನು ತೆಗೆದು ಕೊಳ್ಳದೆ ಹಿಂದೆ ಹೋದ.

ಈ ಸದ್ದನ್ನು ಕೇಳಿ ರುಕ್ಕು ಒಳಗಿನಿಂದ ಬಂದಳು. ನಾರಾಯಣ ನನ್ನು ನೋಡಿದೊಡನೆ ಅವಳು ಬಿಕ್ಕಿ ಬಿಕ್ಕಿ ಅಳತೊಡಗಿದಳು.

"ಏ ಹುಚ್ಚಿ! ಅಳ್ಬೇಡ" ಎಂದು ಮುಂಡಪ್ಪ ಅವಳನ್ನು ಸಂತೈ ಸಿದ. "ಅವನಿಗೇನೋ ತಲೆ ತಿರುಗಿದಂತಾಯಿತು. ಹಾಗೆ ಸ್ಮೃತಿ ತಪ್ಪಿದೆ. ಡಾಕ್ಟರೊಡನೆ ಪರೀಕ್ಷೆ ಮಾಡಿಸಿಯೂ ಆಯಿತು. ಅವನಿ ಗೇನೂ ಆಗಿಲ್ಲ. ಸ್ವಲ್ಪ ಹೊತ್ತು ಹೀಗೇ ಇರಲಿ, ಮೆಲ್ಲನೆ ಸ್ಮೃತಿ ಯಾಗುತ್ತದೆ."

ಆದರೆ ರುಕ್ಕುವಿಗೆ ಅವನೆಂದುದು ಕೇಳಿಸಲಿಲ್ಲ. ಅವಳು ನಾರಾ ಯಣ ಮಲಗಿದ್ದಲ್ಲಿಗೆ ಓಡಿ ಬಂದು ಅವನ ಕಾಲುಗಳನ್ನು ತಿಕ್ಕುತ್ತ ರೋದಿಸಿದಳು. ನಾರಾಯಣನ ಕಣ್ಣುಗಳು ಇನ್ನೂ ಮುಚ್ಚಿದ್ದುವು. ಮುಖದಲ್ಲಿ ಏನೊಂದೂ ಭಾವವಿರಲಿಲ್ಲ. ಅವಳು ಕೈಕಾಲುಗಳನ್ನು ಕೂಡ ಅಲ್ಲಾಡಿಸುತ್ತಿರಲಿಲ್ಲ. ರುಕ್ಕು ಮತ್ತೆ ಅವನ ತಲೆಯ ಬಳಿ ಬಂದು ಅವನ ತಲೆಗೂದಲುಗಳನ್ನು ಸವರತೊಡಗಿದಳು.

"ಏ! ಹೀಗೆ ನೀನು ಗಲಾಟೆ ಮಾಡಿದ್ರೆ ಆಗ್ಲಿಕ್ಕಿಲ್ಲ" ಮುಂಡಪ್ಪ ಅವಳಿಗೆ ಗದರಿಸಿದ. "ಅವನಿಗೆ ಸ್ವಲ್ಪ ಗಾಳಿ ಬರಲಿ. ಅವನ ಮೈಮೇಲೆ ಬೀಳ್ಬೇಡ. ಈಗ ಅವನಿಗೆ ಎಚ್ಚರವಾಗ್ತದೆ. ನೀನೇಕೆ ಹೀಗೆ ಮಾಡ್ತೀ?"

ಅಷ್ಟರಲ್ಲಿ ಪುಟ್ಟೂವು ಬಂದಳು. ಅವಳ ತಂದೆಯ ಬಳಿಗೆ ಹೋಗಿ "ಅಪ್ಪ ಅಪ್ಪ" ಎಂದು ಕರೆದಳು.

ನಾರಾಯಣನಿಗೆ ಇನ್ನೂ ಎಚ್ಚರವಾಗಲಿಲ್ಲ.

ಪುಟ್ಟು ಅವನ ಮೈ ಮೇಲೆ ಕೈಹಾಕಿದಳು. ಮುಂಡಪ್ಪ ಅವ ಳನ್ನು ಎತ್ತಿಕೊಳ್ಳಲು ಬಂದ. ಅವಳು ಓಡಿದಳು.

ಮುತ್ತ ಹೊರಗೆ ಹೋದ. ಅವನ ಹಿಂದೆಯೇ ಮುಂಡಪ್ಪನೂ ಹೋಗಿ ಜಗಲಿಯಲ್ಲಿ ನಿಂತುಕೊಂಡ. ಇಬ್ಬರೂ ಮಾತಾಡಲಿಲ್ಲ. ಆಗ

ಪ್ರವೀಣ ಹೊರಗಿನಿಂದ ಬಂದ. ಮುಂಡಪ್ಪ ಅವನನ್ನು ಕರೆದು ಅವನ ಹೆಗಲಿನ ಮೇಲೆ ಕೈಯಿಟ್ಟ.

ಒಳಗೆ ಪುಟ್ಟು "ಆವಾಯಾ ಹೂ, ಆವಾಯಾ ಹೂ" ಎನ್ನುತ್ತ ನಾರಾಯಣನ ಬಳಿಯಲ್ಲಿ ತಿರುಗುತ್ತಿದ್ದಳು. ರುಕ್ಕು ಅಳುತ್ತ ಅವನ ಮುಖಕ್ಕೆ ಸೆರಗಿನಿಂದ ಗಾಳಿ ಬೀಸುತ್ತಿದ್ದಳು.

"ಅಪ್ಪ, ಅಪ್ಪ! ಆವಾಯಾ ಹೂ........"

ಆಗ ನಾರಾಯಣ ಮೆಲ್ಲನೆ ಕಣ್ಣು ತೆರೆದು ಪುಟ್ಟುವನ್ನು ನೋಡಿದ. ರುಕ್ಕು ಅಳುವುದನ್ನು ನಿಲ್ಲಿಸಿದಳು.

"ಹೂಂ'" ಎನ್ನುತ್ತ ಅವನು ಮೈಯನ್ನು ನೇವರಿಸಿಕೊಂಡು ಎದ್ದು ಕುಳಿತ.

ಪುಟ್ಟು ಅವನ ತೊಡೆಗಳ ಮೇಲೆ ಜಿಗಿದು ಕುಳಿತುಕೊಂಡಳು.

"ಏನೇ? ಆವಾಯಾ ಹೂ" ಎಂದು ಅವಳನ್ನಪ್ಪಿಕೊಂಡು ನಾರಾಯಣ ಅವಳ ಮುಖಕ್ಕೆ ಮುದ್ದಿಟ್ಟ.

"ಮಾವ ಮಾವ" ಎಂದು ಅವಳು ಹೊರಗೆ ಕೈತೋರಿಸಿದಳು.

ಮುಂಡಪ್ಪನೂ ಮುತ್ತನೂ ನಿಧಾನವಾಗಿ ಒಳಗೆ ಬಂದು ಕುಳಿತು ಕೊಂಡರು. ನಾರಾಯಣ ಅವರ ಮುಖವನ್ನು ನೋಡಿ ನಸು ನಕ್ಕ.

"ನಿನ್ಗೆ ಭಾರೀ ಆಯಾಸವಾದಂತೆ ತೋರ್ತದೆ. ಸ್ವಲ್ಪ ಮಲ ಗಿಕೋ, ಎಲ್ಲಿಗೂ ಹೋಗ್ಬೇಡ." ಎಂದು ಮುಂಡಪ್ಪ ಹೇಳಿದ.

"ಹೂಂ" ಆಯಾಸವೇನು? ಏನೋ ತಲೆ ತಿರುಗಿದಂತಾಯಿತು ಅಷ್ಟೆ" ಎಂದು ನಾರಾಯಣ ಎದ್ದು ನಿಂತ.

ರುಕ್ಕು ಒಳಗೆ ಹೋಗಿ ಒಂದು ತಂಬಿಗೆಯಲ್ಲಿ ಮುಂಡಪ್ಪನಿಗೆ ನೀರನ್ನು ಕೊಟ್ಟು ಊಟಕ್ಕೆ ಕರೆದಳು.

"ನಾನೀಗ ಊಟ ತೀರಿದೆ" ಎಂದು ಮುತ್ತ ಹೇಳಿದ.

"ಒಂದಿಷ್ಟು ಊಟ ಮಾಡೋ, ಬಾ" ಎಂದು ನಾರಾಯಣ ಅವನ ಕೈಗಳನ್ನು ಹಿಡಿದು ಎಳೆದುಕೊಂಡು ಒಳಗೆ ಹೋದ.

ನಾರಾಯಣ ಅಂದು ಮತ್ತೆ ಎಲ್ಲಿಗೂ ಹೋಗಲಿಲ್ಲ. ಮನೆಗೆ ಬೇಕಾದ ಸಾಮಾನುಗಳನ್ನು ರುಕ್ಮಿಣೀ ತರಿಸಿದಳು. ತನ್ನ ದೊಡ್ಡ ಅಣ್ಣನು ಬಂದುದಕ್ಕಾಗಿ ಅವನಿಗೊಂದು ಔತಣವನ್ನು ಕೊಡಬೇಕೆಂದು ಅವಳಿಗೆ ಇಚ್ಛೆಯಿದ್ದರೂ ತಂದೆಯ ಸಾವಿನಿಂದಾಗಿ ಅಂಥ ಸಮಾರಂಭಕ್ಕೆ ಎಡೆಯಿರಲಿಲ್ಲ. ಆದರೂ ಇದ್ದುದರಲ್ಲೇ ಆದಷ್ಟು ಒಳ್ಳೆಯ ಊಟವನ್ನು ರಾತ್ರಿಗೆ ತಯಾರಿಸಿದ್ದಳು.

ಮುಂಡಪ್ಪ ಊಟಕ್ಕೆ ಕುಳಿತಾಗ ನಾರಾಯಣನೊಡನೆ ತಾನು ಮಲಗಲಿಕ್ಕೆ ಮುತ್ತನಲ್ಲಿಗೆ ಹೋಗುತ್ತೇನೆಂದ. ನಾರಾಯಣ ಅಡ್ಡಿ ಮಾಡಲಿಲ್ಲ. ಅವನ ಮನಸ್ಸಿನ ಕ್ಷೋಭೆ ಇನ್ನೂ ಆರಿರಲಿಲ್ಲ. ಈ ಒಳಗೆ ತಾನು ತನ್ನ ಮಾವನನ್ನು ಕೊಂದವನೆಂದು ಮುಂಡಪ್ಪನಿಗೆ ಸುದ್ದಿ ಸಿಕ್ಕಿರಲೂ ಸಾಕೆಂದು ಅವನು ಭಾವಿಸಿದ್ದ. ಅದರಲ್ಲೂ ತನಗೆ ಹಗಲಲ್ಲಿ ಮೂರ್ಛೆ ಹೋದುದರಿಂದಾಗಿ ಅವನಿಗೆ ತಾನೇ ಅಪರಾಧಿಯೆಂದು ಸ್ಪಷ್ಟವಾಗಿರಬಹುದೆಂದು ಊಹಿಸಿದ.

ಮುಂಡಪ್ಪ ಅವನೊಡನೆ ಹೆಚ್ಚು ಮಾತಾಡಲಿಲ್ಲ. ಅವನೊಡನೆ ಹಿಂದೆಯೂ ಹೆಚ್ಚಾಗಿ ಮಾತಾಡುತ್ತಿರಲಿಲ್ಲ. ನಾರಾಯಣನಿಗೆ ಅವನನ್ನು ಕಂಡರೆ ಒಂದು ವಿಧದ ಭಯವೂ ಆಗುತ್ತಿತ್ತು. ಹಿಂದೆ ಇಬ್ಬರೂ ಬಸ್ಸಿನ ಕೆಲಸದಲ್ಲಿದ್ದಾಗ ನಾರಾಯಣ ತಪ್ಪು ಮಾಡಿದ್ದಕ್ಕೆ ಒಂದೆರಡು ಸಲ ಮುಂಡಪ್ಪ ಅವನಿಗೆ ಹೊಡೆಯಲಿಕ್ಕೂ ಹೊಡೆದಿದ್ದ. ಅನೇಕ ಸಲ ಗದರಿಸಿದ್ದ. ಆದರೆ ಇತರ ಸಮಯದಲ್ಲಿ ಅವನೊಡನೆ ವಿನೋದವಾಡುವುದೂ ಇತ್ತು. ನಾರಾಯಣ ಮಾತ್ರ ಅವನಿಗೆ ಯಾವುದಕ್ಕೂ ಪ್ರತ್ಯುತ್ತರ ಕೊಡುತ್ತಿದ್ದಿಲ್ಲ.

ಮುಂಡಪ್ಪ ಊಟವಾದ ಬಳಿಕ ಮರುದಿನ ಬರುತ್ತೇನೆಂದು ಹೊರಟು ಹೋದ.

ನಾರಾಯಣ ಹಾಸಿಗೆ ಬಿಡಿಸಿ ಮಲಗಿಕೊಂಡ. ಅವನಿಗೆ ನಿದ್ದೆ

ಹತ್ತಲಿಲ್ಲ. ತಾನು ಬಹುಶಃ ಮನೆಯಲ್ಲಿರುವುದು ಇದೇ ಕಡೆಯ ದಿನವಾಗಿರಬಹುದೆಂದು ಭಾವಿಸಿದ.

ತನಗೆ ಶಿಕ್ಷೆಯಾಗಬಹುದು. ಇಲ್ಲವೇ ಫಾಶಿಯೂ ಆಗಬಹುದು. ಈ ಕಟು ಸತ್ಯದಿಂದ ತಾನು ಇನ್ನು ಓಡಿ ಫಲವಿಲ್ಲ. ತನ್ನ ಜೀವನದ ಆಟ ಇಲ್ಲಿಗೆ ಸಂಪೂರ್ಣವಾಯಿತು. ತನ್ನ ಹೆಂಡತಿ, ತನ್ನ ಮಕ್ಕಳು, ತನ್ನ ಮನೆ–ಇವಕ್ಕೆಲ್ಲ ಇನ್ನು ಅರ್ಥವಿಲ್ಲ. ತನ್ನ ಜೀವನ ಇಲ್ಲಿ ಅಂತ್ಯ ವಾಗಬೇಕು. ತಾನು ಅಪರಾಧಿ ಎಂಬುದನ್ನು ಸಿದ್ಧ ಪಡಿಸಲಿಕ್ಕೆ ಇನ್ನೇನು ಪುರಾವೆ ಬೇಕು? ಇಲ್ಲವಾದರೆ ತಾನು ಅಂದು ಮಾವ ಸಾಯುವ ಹೊತ್ತಿಗೆ ಇಲ್ಲಿ ಬರಬೇಕಿತ್ತೆ? ಅವನು ಸಾಯುವ ಮುಂಚಿನ ದಿನವೇ ಮರಣ ಶಾಸನವನ್ನು ಬರೆದಿಡಬೇಕಿತ್ತೆ? ಅದರಲ್ಲೂ ತನ್ನ ಹೆಂಡತಿಗೆ ಹೆಚ್ಚಿನ ಪಾಲನ್ನು ಕೊಡಬೇಕೆಂದು ಬರೆಸಬೇಕಿತ್ತೆ? ಮಾವ ಇನ್ನೂ ನೂರು ವರ್ಷ ಬದುಕಿದರೂ ತಾನು ಅಡ್ಡಿ ಮಾತಾಡುತ್ತಿದ್ದಿಲ್ಲ. ಅವನನ್ನು ಕೊಲ್ಲಬೇಕೆಂದು ಎಂದಿಗೂ ಬಯಸುತ್ತಿದ್ದಿಲ್ಲ ತನಗೆ ಒಂದು ವೇಳೆ ಅವನ ಸಂಪತ್ತಿನ ಮೇಲೆ ಆಸೆಯಿರುತ್ತಿದ್ದರೆ. ಆತನನ್ನು ಕೇಳಿ ತೆಗೆದುಕೊಳ್ಳಬಹುದಿತ್ತು. ಇಂಥಾ ಹೀನಕೃತ್ಯಕ್ಕೆ ತಾನು ಅದಕ್ಕಾಗಿ ಕೈಹಾಕುತ್ತಿದ್ದಿಲ್ಲ. ಆದರೆ ಈಗ ತನ್ನನ್ನು ಯಾರು ನಂಬುವವರು? ಇಷ್ಟು ಸ್ಪಷ್ಟವಾದ ರುಜುವಾತುಗಳ ಮುಂದೆ ತಾನು ಹೇಗೆಂದು ಈ ಅಪರಾಧವನ್ನು ಅಲ್ಲಗಳೆಯಬಹುದು? ಹಾಗೆ ಅಲ್ಲಗಳೆದು ಒಂದು ವೇಳೆ ಶಿಕ್ಷೆಯಿಂದ ಪಾರಾದರೂ ಜನರು ಏನೆಂದಾರು? ರುಕ್ಕು ಬಳಿಕ ತನ್ನೊಡನೆ ಇರಬಹುದೆ? ಈ ಮುಂಡೆಪ್ಪ, ಈ ಮುತ್ತ ತನ್ನನ್ನು ಕೋಪದಿಂದ ಕೊಲ್ಲದಿರಬಹುದೆ? ತನ್ನನ್ನು ಊರಲ್ಲಿ ಯಾರೂ ಮತ್ತೆ ನಂಬಲಿಕ್ಕಿಲ್ಲ. ತನಗೆ ಕೆಲಸವೂ ಮತ್ತೆ ಸಿಗಲಿಕ್ಕಿಲ್ಲ. ತಾನು ಮತ್ತೆ ದಿನ ದಿನವೂ ನಿಂದೆ ಅಪಮಾನಗಳನ್ನು ಎದುರಿಸ ಬೇಕಾದೀತು. ಏನೇ ಇರಲಿ, ತನಗೆ ಅಂತ್ಯ ಬಂದಿದೆ. ಅದನ್ನು ಅಪ್ಪಿಕೊಳ್ಳುವುದು ಈ ಪ್ರಸಂಗದಲ್ಲಿ ಒಳ್ಳೆಯದು.

ಇಂಥ ಯೋಚನೆಗಳು ಅವನ ಮನಸ್ಸಿನಲ್ಲಿ ಬರುತ್ತಿದ್ದಾಗ ಉಡುಪಿಯಲ್ಲಿ ಅಂದು ರಾತ್ರಿ ಆ ಹೆಂಗಸು ಹೇಳಿದ ಮಾತೂ ಅವನಿಗೆ ನೆನಪಾ

ಗುವುದು. ಇನ್ನು ಒಂದೋ ಎರಡೋ ದಿನಗಳೊಳಗೆ ತನ್ನ ಚಿಂತೆ ಪರಿಹಾರವಾಗುವುದೆಂದಿದ್ದನಾತ. ಆದರೆ, ಈತನಕ ಪರಿಹಾರದ ಚಿಹ್ನೆಗಳು ಕಾಣುವುದಿಲ್ಲ. ಪರಿಹಾರದ ಬದಲು ಆ ಚಿಂತೆಯು ಇನ್ನೂ ಆಳವಾಗುವ ಸಂಭವವೇ ಹೆಚ್ಚು. ಅವಳು ತನ್ನನ್ನು ಹಾಗೆ ವಂಚನೆಯಿಂದ ಮನೆಯೊಳಗೆ ಕರೆದು ತಂದುದಕ್ಕಾಗಿ ತಾನೇನಾದರೂ ಮತ್ತೊಂದರ ಕೂಡದಂತೆ ಹಾಗೆ ಹೇಳಿರಲೂಬಹುದು. ಅವಳಿಗೆ ತನ್ನೊಡನೆ ರಮಿಸಬೇಕೆಂದಿತ್ತು ಬಹುಶಃ. ತನ್ನೊಡನೆ ಹಣವಿದ್ದರೆ ಕಸಿದುಕೊಳ್ಳಬೇಕೆಂದು ಅವಳು ಆಶಿಸಿದ್ದಿರಬಹುದು. ಆದರೆ ತನ್ನೊಡನೆ ಹಣವಿಲ್ಲವೆಂದು ತಿಳಿದೊಡನೆ ಅವಳು ಮನಸ್ಸನ್ನು ಬದಲಿಸಿ ತನಗೆ ಏನೇನೋ ಹೇಳಿರಬೇಕು. ಅವಳಿಗೆ ಅಷ್ಟುಸ್ಪಷ್ಟವಾಗಿ ತನ್ನ ಚಿಂತೆಯೇನೆಂದು ತಿಳಿಯುತ್ತಿದ್ದರೆ ಅವಳು ಅದನ್ನು ವಿವರಿಸಿ ತನಗೆ ಹೇಳಬಹುದಿತ್ತು. ತಾನು ಅದರಿಂದ ವಿಮೋಚನೆಯಾಗುವ ದಾರಿಯನ್ನು ವಿವರಿಸಬಹುದಿತ್ತು. ಅವಳು ತನ್ನ ಮನಸ್ಸಿನ ತಾತ್ಕಾಲಿಕ ಶಾಂತಿಗಾಗಿ ಏನೋ ಎಲ್ಲವನ್ನು ಒಂದಕ್ಕೊಂದು ಜೋಡಿಸಿ ಹೇಳಿರಬಹುದು.

ಆದರೆ ಅವಳು ಹೇಳಿದುದು ಸತ್ಯವಾದರೆ? ಸತ್ಯವಾಗಲಿಕ್ಕಿಲ್ಲವೆಂದು ಹೇಳಲೂ ಸಾಧ್ಯವಿಲ್ಲ. ಆದರೆ ಆ ತೃಣಮಾತ್ರ ಆಶಾವಾದವು ಅವನನ್ನು ಆತ್ಮಹತ್ಯೆಯ ದಾರಿಯನ್ನು ಹಿಡಿಯಲು ಬಿಡಲಿಲ್ಲ.

ನಾರಾಯಣನ ಮುಂದೆ ಅಂದಿನ ದುರಂತದ ದೃಶ್ಯ ಬಂತು.

ಅವನು ಅಂದು ಸಂಜೆ ಬಸ್ ನಿಲ್ದಾಣದಲ್ಲಿ ಪ್ಯಾಸೆಂಜರರನ್ನು ಇಳಿಸಿದ್ದ. ಕಂಡಕ್ಟರ ಮೋನಪ್ಪನೂ ಅಲ್ಲಿ ಇಳಿದು ತಾನು ಹಣವನ್ನು ಕೊಟ್ಟು ಬರುತ್ತೇನೆಂದ. ನಾರಾಯಣ ಅಂದು ಮನೆಗೆ ಹೋಗಿ ಎಣ್ಣೆ ಸ್ನಾನಮಾಡಿ ಸಾಧ್ಯವಾದರೆ ರಾತ್ರಿ ರುಕ್ಮುವನ್ನೂ ಮಕ್ಕಳನ್ನೂ ಸಿನೀಮಕ್ಕೆ ಕರೆದುಕೊಂಡು ಹೋಗಬೇಕೆಂದಿದ್ದ. ಹಾಗೆಯೇ ಬಸ್ಸನ್ನು ವೇಗವಾಗಿ ಕೊಂಡು ಹೋದ. ಆಗ ಮಳೆಯೂ ಹನಿಹನಿಯಾಗಿ ಬರತೊಡಗಿತ್ತು. ಎದುರಿನ ಗಾಜಿನಲ್ಲೆಲ್ಲ ನೀರ ಹನಿಗಳು ಬಿದ್ದುವು. ಖಾಲಿ ಬಸ್ಸಾದುದರಿಂದಲೂ ರಸ್ತೆಯಲ್ಲಿ ಹೆಚ್ಚಾಗಿ ಜನರು ಇಲ್ಲದ್ದರಿಂದಲೂ ಅವನಿಗೆ ವೇಗದ ಮಿತಿಯೂ ತಿಳಿಯಲಿಲ್ಲ. ತನ್ಮಧ್ಯೆ

ಒಂದು ಬೀಡಿಯನ್ನು ಸೇದ ಬೇಕೆಂದಾಯಿತವನಿಗೆ. ಜೇಬಿನಿಂದ ಬೀಡಿಯಕಟ್ಟನ್ನು ತೆಗೆದು ಅದರಿಂದ ಒಂದು ಬೀಡಿಯನ್ನು ಎಳೆದು ತೆಗೆದು ಅದನ್ನು ಬಾಯಿಯಲ್ಲಿಟ್ಟುಕೊಂಡ. ಬೆಂಕಿ ಪೆಟ್ಟಿಗೆ ಆಗ ಸಿಗಲಿಲ್ಲ. ಅದನ್ನು ಹುಡುಕ ತೊಡಗಿದ. ಕೊನೆಗೆ ಅದು ಇಜಾರಿನ ಜೇಬಿನೊಳಗೆ ಸಿಕ್ಕಿತು. ಅದರಿಂದ ಒಂದು ಕಡ್ಡಿ ತೆಗೆದು ಗೀರಿದ. ರಸ್ತೆಯು ನೇರವಾದ್ದರಿಂದ ಚುಕ್ಕಾಣಿಯ ಕೈ ಬಿಟ್ಟ. ಗ್ಲಾಸಿನಲ್ಲಿ ನೀರಹನಿಗಳು ಕುಳಿತಿದ್ದುದರಿಂದ ಅವನಿಗೆ ರಸ್ತೆ ಅಸ್ಪಷ್ಟವಾಗಿ ಕಾಣುತ್ತಿತ್ತು. ಮೊದಲು ತೆಗೆದ ಕಡ್ಡಿ ತುಂಡಾಗಿ ಹೋಯಿತು. ಮತ್ತೊಂದು ಕಡ್ಡಿಯ ತುದಿ ಸ್ವಲ್ಪ ಉರಿದು ನಂದಿ ಹೋಯಿತು. ಅವನು ಬೆಂಕಿ ಪೆಟ್ಟಿಗೆಯ ಬದಿಯನ್ನು ಚೆನ್ನಾಗಿ ತಿಕ್ಕಿ ಮೂರನೆಯ ಕಡ್ಡಿಯನ್ನು ತೆಗೆದು ಗೀರಿದ. ಅದು ಉರಿದಾಗ ಮುಖವನ್ನು ಬಗ್ಗಿಸಿ ತುಟಿಯಲ್ಲಿದ್ದ ಬೀಡಿಯ ತುದಿಯನ್ನು ಅದರ ಬಳಿಗೆ ತಂದ. ಅವನು ತಲೆಯನ್ನು ಫಕ್ಕನೆ ಮೇಲಕ್ಕೆತ್ತಿದ್ದ. ಬಸ್ಸಿನ ಚಕ್ರ ಯಾವುದೋ ಘನ ವಸ್ತುವಿನ ಮೇಲೆ ಸರಿದಂತಾಯಿತು. ಅವನಿಗೆ ಆಗ ಎದುರಿನ ರಸ್ತೆ ಬಹಳ ಅಸ್ಪಷ್ಟವಾಗಿ ತೋರುತ್ತಿತ್ತು. ಕೂಡಲೇ ಬಸ್ಸನ್ನು ನಿಲ್ಲಿಸಿ ಬದಿಗೆ ಬಂದು ರಸ್ತೆಯನ್ನು ನೋಡಿದ. ಅಲ್ಲಿ ಅವನ ಮಾವ ಬಿದ್ದಿದ್ದ. ರಕ್ತ ಮೇಲೆ ಹಾರುತ್ತಿತ್ತು. ಆ ರಸ್ತೆಯ ಆಚಿನಲ್ಲಿ ಕವಲೊಡೆದ ಅಡ್ಡ ರಸ್ತೆಯಿಂದ ಮೋಟರಿನ ಶಬ್ದ ಕೇಳುತ್ತಿತ್ತು. ನಾರಾಯಣ ಬೇಗನೆ ತನ್ನ ಬಸ್ಸನ್ನು ಪುನಃ ಓಡಿಸಿದ.

ಈ ದೃಶ್ಯವನ್ನು ನೆನೆದಾಗ ತಾನು ತಪ್ಪಿತಸ್ಥನಲ್ಲವೆಂದು ಹೇಗೆ ಹೇಳ ಬಹುದು ಎಂದು ಅವನಿಗೆ ತೋರಿತು. ತನ್ನ ಬಸ್ಸಿನಲ್ಲಿ ಎದುರಿನ ಗಾಜನ್ನು ಉಜ್ಜುವ ಉಪಕರಣವಿರಲಿಲ್ಲವೆಂಬುದು ಅವನಿಗೆ ಹಿಂದಿನ ದಿನ ನೆನಪಾದಾಗ ಅದೊಂದು ಕಾರಣವನ್ನು ತಾನು ಹೇಳ ಬಹುದೆಂದು ನಿಶ್ಚಯಿಸಿದ್ದ. ಆದರೆ ಅದು ಇರಲಿಲ್ಲವೆಂಬುದಕ್ಕೆ ಬೇರೆ ಯಾರು ಸಾಕ್ಷಿ ಹೇಳಬಹುದು ? ಅದು ಇಲ್ಲದಿದ್ದರೆ ಅದನ್ನು ಜೋಡಿಸುವ ಕೆಲಸ ತನ್ನದೇ ಆಗಿರಲಿಲ್ಲವೆ ? ಹಾಗೆಂದು ಯಾರು ತನ್ನನ್ನು ಕೇಳದಿರಲಿಕ್ಕಿಲ್ಲ. ತಾನು ಈ ಕಾರಣವನ್ನು ಹೇಳಿದರೆ, ಇದನ್ನು

ಕೇಳಿ ಎಲ್ಲರೂ ನಗದಿರಲಿಕ್ಕಿಲ್ಲ. ಹಾಗೆ ರಸ್ತೆ ಕಾಣದೆ ಇರುವಾಗ ತಾನು ಬಸ್ಸನ್ನು ಮತ್ತೂ ಏಕೆ ಓಡಿಸಿದೆನೆಂಬ ಪ್ರಶ್ನೆಯೂ ಸ್ವಾಭಾವಿಕವಾಗಿ ಬರುವುದು. ಈ ಅಪಘಾತಕ್ಕೆ ತಾನು ಬೀಡಿ ಹಚ್ಚಿಸಿದುದೇ ಕಾರಣವಾಗಿರಬೇಕು. ಆದರೆ ಅದು ತನ್ನದೇ ಅಜಾಗ್ರತೆ. ಅದನ್ನು ತನ್ನ ಪರವಾಗಿ ವಕೀಲರು ವಾದಿಸಲಿಕ್ಕಿಲ್ಲ. ಆದರೆ ತಾನು ತನ್ನ ಮಾವ ನಡೆಯುತ್ತಿರುವುದನ್ನು ಕಂಡಿರಲಿಲ್ಲ. ಅವನು ಬಹುಶಃ ಅಡ್ಡದ ರಸ್ತೆಯಿಂದ ಫಕ್ಕನೆ ಬಂದಿರಬಹುದು. ಇಲ್ಲವೇ ಅವನು ಬದಿಯಿಂದ ಹೋಗುತ್ತಿದ್ದಾಗ ತನ್ನ ಮೋಟರಿನ ಚಕ್ರ ತಾಗಿ ಒಮ್ಮೆಲೇ ಕೆಳಗೆ ಬಿದ್ದಿರಲೂ ಸಾಕು. ಮತ್ತೆ ಈ ಅಪಘಾತವನ್ನು ಯಾರದ ನೋಡಲಿಲ್ಲ ವೆಂಬುದು ನಿಜವಾದರೂ, ಈ ತಕ್ಷೀರಿನ ಸಮಯ ಅದಕ್ಕೆ ಸಾಕ್ಷ್ಯಗಳು ಮುಂದೆ ಬರಲೂ ಬಹುದು. ಅಲ್ಲದೆ ಅದರ ಮರುದಿನ ತನ್ನ ಬಸ್ಸನ್ನು ತನಿಖೆ ಮಾಡಿದ ಪೋಲೀಸಿನವನಿಗೆ ಅದರಲ್ಲಿ ರಕ್ತದ ಕಲೆಗಳು ಕಾಣಸಿಕ್ಕಿರಬಹುದು. ಅದೂ ತನಗೆ ವಿರುದ್ಧವಾದ ಒಂದು ಪುರಾವೆ ಎಂದು ನಾರಾಯಣ ನೆನೆದ.

ರುಕ್ಕು ಆಗ ಕೆಲಸವನ್ನೆಲ್ಲ ತೀರಿಸಿ, ಮಕ್ಕಳನ್ನು ಮಲಗಿಸಿ ನಾರಾಯಣನಿದ್ದಲ್ಲಿಗೆ ಬಂದಳು. ಅಲ್ಲಿ ವಸ್ತ್ರವನ್ನು ಬದಲಿಸಿ, ಕೂದಲುಗಳನ್ನು ಸರಿಪಡಿಸಿ ಅವನ ಬದಿಗೆ ಬಂದು ದೀಪವನ್ನಾರಿಸಿ ಮಲಗಿದಳು. ಅವನಿಗೆ ನಿದ್ದೆ ಬಂದಿದೆಯೆಂದು ಅವಳು ಭಾವಿಸಿದ್ದಳು.

ಅವನು ತುಟಿ ಬಿಚ್ಚಲಿಲ್ಲ.

ಅವಳು ತನ್ನನ್ನು ಮದುವೆಯಾಗಿ ಹತ್ತು ವರ್ಷ ಕಳೆಯಿತು. ಅವಳ ಸಂಸರ್ಗದಲ್ಲಿ ತಾನು ಎಂಥ ಚಿಂತೆಯನ್ನೂ ಈವರೆಗೆ ಪರಿಹರಿಸಿಕೊಳ್ಳುತ್ತಿದ್ದೆ. ಆದರೆ ಈಗ ತಮ್ಮಿಬ್ಬರ ಜೀವನ ಕವಲೊಡೆಯುತ್ತಿದೆ. ಇನ್ನು ಮುಂದೆ ತಾವು ಒಂದೇ ಮಾಡಿನ ಕೆಳಗೆ, ಒಂದೇ ಚಾಪೆಯಲ್ಲಿ ಒಟ್ಟಿಗೆ ಬಹುಶಃ ಮಲಗಲಿಕ್ಕಿಲ್ಲ. ಮರುದಿನದಿಂದಲೋ ಮತ್ತೆರಡು ದಿನಗಳ ಬಳಿಕವೋ ತನ್ನನ್ನು ಅವಳು ಮಹಾ ವಂಚಕನೆಂದು ಕರೆಯಲಿದ್ದಾಳೆ. ತನ್ನನ್ನು ಅಧಮ, ಕೊಲೆಗಾರ ಎಂಬಿತ್ಯಾದಿಯಾಗಿ ಮೂದ

ಲಿಸಲಿದ್ದಾಳೆ. ಅವಳ ಮಕ್ಕಳು, ಅವಳ ಅಣ್ಣಂದಿರು ಎಲ್ಲ ತನ್ನ ವೈರಿಗಳಾಗಲಿದ್ದಾರೆ. ಆಮೇಲೆ ಯಾರಾವರೂ ತನ್ನ ಹೆಸರನ್ನೆತ್ತಿದರೆ ಅವರು ಕೋಪದಲ್ಲಿ ಹಲ್ಲು ಕಡಿಯಬಹುದು.

ನಾರಾಯಣನ ಜ್ಞಾಪಕ ಇನ್ನೂ ಹಿಂದಕ್ಕೋಡುತ್ತಿತ್ತು. ಅವನು ಮುಂಡಪ್ಪನೊಡನೆ ಕೆಲಸದಲ್ಲಿದ್ದಾಗ ಕಾಹಿಲೆ ಬಿದ್ದವನನ್ನು ಮುಂಡಪ್ಪ ಮಂಗಳೂರಿನ ತನ್ನ ಮನೆಗೇ ಕರೆದುಕೊಂಡು ಹೋಗಿ ಆರೈಕೆ ಮಾಡಿಸಿದ್ದ. ಆಗ ನಾರಾಯಣ ರುಕ್ಕುವನ್ನು ಮೊದಲಬಾರಿ ಕಂಡುದು. ಆಗ ಅವಳು ಚಿಕ್ಕವಳು. ಸಾಲೆಗೆ ಹೋಗುತ್ತಿದ್ದಳು. ಅವನಿಗೆ ಸಮಯಕ್ಕೆ ಸರಿಯಾಗಿ ಆಹಾರ ಮತ್ತು ಔಷಧಿಗಳನ್ನೂ ಅವಳೇ ಕೊಡುತ್ತಿದ್ದಳು. ಅವಳ ಚಲುವಿಗಿಂತಲೂ ಹೆಚ್ಚಾಗಿ ಅವಳ ಸೌಜನ್ಯತೆಯು ಅವನ ಮನಸ್ಸನ್ನು ಸೋಲಿಸಿತ್ತು. ಆಗ ತಾನು ಅವಳನ್ನು ಎಂದಾದರೂ ಮದುವೆಯಾದೇನೆಂದು ಅವನು ಭಾವಿಸಿರಲಿಲ್ಲ; ಅವನು ತೀರ ಹಳ್ಳಿಯವ. ಅವಳು ಪಟ್ಟಣದವಳು. ಅವನು ಅಕ್ಷರಹೀನ. ಅವಳು ಬರಹ ಕಲಿತವಳು. ಅವಳ ನಡೆನುಡಿಗಳಲ್ಲೂ ಅವನಿಗೆ ಅವಳು ತನಗಿಂತ ಎಷ್ಟೋ ಉತ್ಕೃಷ್ಟಳೆಂದು ತೋರಿತ್ತು.

ಮತ್ತೆ ಅವಳ ಮನೆಗೆ ಹಲವು ಸಲ ಬಂದಿದ್ದ. ಆಗ ಅವಳು ದೊಡ್ಡವಳಾಗಿದ್ದಳು. ಆದರೆ ಅವಳು ಅವನನ್ನು ಕಂಡು ಕೃತ್ರಿಮವಾದ ಲಜ್ಜೆಯನ್ನು ತೋರ್ಪಡಿಸುತ್ತಿದ್ದಿಲ್ಲ. ಅವನನ್ನು ಕಂಡೊಡನೆ ಅವನೊಡನೆ ಮಾತಾಡುತ್ತಿದ್ದಳು. ಅವಳೇ ಅವನನ್ನು ಉಪಚರಿಸುತ್ತಿದ್ದಳು. ಆಗ ನಾಚಿಕೆಯಾಗುತ್ತಿದ್ದುದು ಅವನಿಗೆ ಮಾತ್ರ. ಅವನೇ ಅವಳೊಡನೆ ಮಾತಾಡಲು ಹಿಂಜರಿಯುತ್ತಿದ್ದ. ಅದೂ ಮುಂಡಪ್ಪನಾಗಲೀ, ಮುತ್ತನಾಗಲೀ, ಅವಳ ತಂದೆ ದೂಮನಾಗಲೀ ಇರುವಾಗ ಅವಳನ್ನು ನಾರಾಯಣ ಕಣ್ಣೆತ್ತಿ ನೋಡುತ್ತಲೂ ಇರಲಿಲ್ಲ.

ಮುಂಡಪ್ಪ ನಾರಾಯಣನಿಗೆ ಅವಳನ್ನು ಮದುವೆಯಾಗಲು ಪ್ರಸ್ತಾಪವನ್ನೆತ್ತಿದ್ದುದು ಮತ್ತೂ ಕೆಲವು ಸಮಯದ ನಂತರ. ಆಗ ನಾರಾಯಣ ಬಸ್ಸಿನ ಡ್ರೈವರನಾಗಿ ಸೇರಿದ್ದ. ಅದೂ ಮುಂಡಪ್ಪ ಬಹಳ ಅನೌಪಚಾರಿಕವಾಗಿ ಅವನಿಗೆ ಮದುವೆಯಾಗಲು ಹೇಳಿದ್ದ. ಮೊದಲು

ನಾರಾಯಣ ಅವನೆಂದುದನ್ನು ನಂಬಲಿಲ್ಲ. ಅವನದು ಏನೋ ತಮಾಷೆಯಾಗಿರಬಹುದೆಂದು ಗ್ರಹಿಸಿದ್ದ. ಆದರೆ ಒಂದು ದಿನ ಮುಂಡಪ್ಪ ಅವನನ್ನು ತನ್ನ ಮನೆಗೆ ಕರೆದುಕೊಂಡು ಹೋಗಿ ದೂಮನೊಡನೆ ಹೇಳಿಯೇಬಿಟ್ಟ. ದೂಮ ಮದುವೆಯ ದಿನವನ್ನು ನಿಶ್ಚಯ ಮಾಡಿಯೂ ಆಯಿತು. ಅಲ್ಲದೆ ನಾರಾಯಣ ಮತ್ತು ರುಕ್ಕುವಿಗೆ ಮತ್ತೆ ವಾಸಿಸಲಿಕ್ಕೆ ಅವರು ಈಗ ಇದ್ದ ಮನೆಯನ್ನೂ ಗೊತ್ತುಮಾಡಿಟ್ಟ.

ನಾರಾಯಣ ತನ್ನ ಹಿರಿಯರೊಡನೆ ಈ ವಿಚಾರ ತಿಳಿಸಿದಾಗ ಅವರಿಂದ ನಾನಾ ನಮೂನೆಯ ಅಡ್ಡಿ–ಆಕ್ಷೇಪಗಳು ಬಂದುವು. ಮುಖ್ಯವಾಗಿ ಅವರಿಗೆ ಅವನು ಮೋಟರಿನ ಕೆಲಸವನ್ನು ಮಾಡುವುದರಲ್ಲೇ ಮನಸ್ಸಿರಲಿಲ್ಲ. ಅವನ ತಂದೆ ಮನೆಯಲ್ಲಿ ಅವನನ್ನು ಬೇಸಾಯಕ್ಕೆ ನಿಲ್ಲಬೇಕೆಂದ. ತಾಯಿ ತನ್ನ ಅಣ್ಣನ ಮಗಳನ್ನು ಮದುವೆಯಾಗಬೇಕೆಂದಳು. ಅವನ ಅಣ್ಣ ಪೇಟೆಯ ಹುಡುಗಿಯನ್ನು ಮದುವೆಯಾಗಬಾರದೆಂದ. ಹಾಗಾಗಿ ನಾರಾಯಣ ಅಸಲ ಯಾರೊಡನೆಯೂ ಹೇಳದೆಯೇ ಮನೆಯಿಂದ ಹೊರಬೀಳಬೇಕಾಯಿತು. ಮತ್ತೆ ಜರಗಿದ ಮದುವೆಗೆ ಕೂಡ ಅಸಮಾಧಾನದಿಂದಲೇ ಅವರು ಮಂಗಳೂರಿಗೆ ಬಂದು ಹೋಗಿದ್ದರು.

ಮದುವೆಯಾದ ಮರುದಿನದಿಂದಲೇ ರುಕ್ಕು ಮತ್ತು ಅವನು ಆ ಮನೆಯಲ್ಲಿ ವಾಸಿಸತೊಡಗಿದ್ದರು. ರುಕ್ಕು ಅವನನ್ನು ಮತ್ತೂ ಮಮತೆಯಿಂದಲೇ ಕಂಡಿದ್ದಳು. ಅವರೊಳಗೆ ಏನಾದರೂ ಮನಸ್ತಾಪವಾಗುವ ಪ್ರಸಂಗಗಳೇ ಬಂದಿರಲಿಲ್ಲ. ಕಂಡ ಕಂಡ ಹೆಂಗಸರನ್ನು ಲಾಲಸೆಯ ದೃಷ್ಟಿಯಿಂದ ನೋಡುವ ತನ್ನ ಸ್ವಭಾವವನ್ನು ತನ್ನದೊಂದು ದೊಡ್ಡ ದೌರ್ಬಲ್ಯವೆಂದೇ ಅವನು ನಂಬಿದ್ದ. ಆದುದರಿಂದಲೇ ಅವಳು ತನಗಿಂತ ಎಷ್ಟೋ ಶ್ರೇಷ್ಠಳೆಂಬ ಭಾವನೆ ಅವನಿಗುಂಟಾಗಿತ್ತು.

ಮಧ್ಯರಾತ್ರಿಯಾಗುತ್ತಿತ್ತು. ರುಕ್ಕುವಿಗೆ ನಿದ್ದೆ ಚೆನ್ನಾಗಿ ಬಂದಿತ್ತು. ಕೊನೆಗೆ ಅವಳನ್ನು ಎಚ್ಚರಿಸಿ ತನ್ನ ಕೃತ್ಯವನ್ನೆಲ್ಲ ಅವಳೊಡನೆ ಹೇಳಿಬಿಡುವುದೇ ಒಳ್ಳೆಯದೆಂದು ಅವನು ನಿಶ್ಚಯಿಸಿದ. ಅವಳಿಗೆ ಈಗಾಗಲೇ ಈ ಕುರಿತು ಸಮಾಚಾರ ಸಿಕ್ಕಿರಲೂ ಸಾಕು. ಆದರೂ ಕೊನೆಗೆ

ಅವಳ ಮನಸ್ಸಿನಲ್ಲಿ ತಾನು ವಂಚಿಸಿದೆನೆಂಬ ಭಾವನೆ ಇರಬಾರದು. ಆಗುವುದು ಆಗಿ ಹೋಗಿವೆ ಇನ್ನು ಏನನ್ನು ಹೇಳಿದರೂ, ಏನನ್ನು ಮಾಡಿದರೂ ಅದನ್ನು ಸರಿ ಪಡಿಸಲು ಸ್ಯಾಧವಿಲ್ಲ. ಅವಳ ತಂದೆ ಸತ್ತವ ಮರಳಿ ಜೀವಂತನಾಗಲಿಕ್ಕಿಲ್ಲ.

ಅವನು ಕತ್ತಲೆಯಲ್ಲಿ ಅವಳ ಮುಖದತ್ತ ಕೈ ಚಾಚಿದ. ಅವಳು ಆ ಚಳಿಯಲ್ಲೂ ನೆಲದಮೇಲೆಯೇ ಮಲಗಿದ್ದುದನ್ನು ತಿಳಿದು ಅವನಿಗೆ ಖೇದವಾಯಿತು. ಅವನ ಕೈ ಅವಳ ಎದೆಗೆ ತಾಗಿತು. ಅವಳಿಗೆ ಎಚ್ಚರವಾಯಿತು.

"ನಾನು" ಎಂದು ಅವನು ಪಿಸುಗುಟ್ಟಿದ.

ಕೂಡಲೇ ಅವಳು ಅವನ ಬಳಿಗೆ ಹೊರಳಿ ಅವನನ್ನು ಬಿಗಿದಪ್ಪಿಕೊಂಡಳು. ಅವನ ಮುಖದ ಮೇಲೆ ಅವಳ ತುಟಿಗಳು ಸರಿದುವು. ಅವನೂ ಪ್ರತಿಯಾಗಿ ಅವಳನ್ನು ಅಪ್ಪಿಕೊಂಡ. ಆದರೆ ಅವನ ಮನಸ್ಸು ಕುಗ್ಗಿಹೋಗಿತ್ತು. ಆವೇಶಗಳು ಚೇತನರಹಿತವಾಗಿದ್ದುವು. ಮರಣದ ನೆರಳು ಆಗಲೇ ಅವನ ಮೇಲೆ ಬಿದ್ದಿತ್ತು.

"ನಿನ್ಗೆ ಎಚ್ಚರವಿದೆಯೆ ?" ಎಂದು ಅವನು ಮರಳಿ ಪಿಸುಗುಟ್ಟಿದ.

"ಹೂಂ" ಎಂದು ಅವನ ಕಿವಿಯನ್ನು ಮೃದುವಾಗಿ ಅವಳು ಕಚ್ಚಿದಳು.

"ಇಗೋ ನಾನು ಹೇಳುವುದನ್ನು ಕೇಳು. ಮತ್ತೆ ಉಳಿದದ್ದೆಲ್ಲ" ಎಂದನವ.

"ಏನು ?" ಎಂದು ಆಕೆ ಕುತೂಹಲದಿಂದ ಪ್ರಶ್ನಿಸಿದಳು.

"ನಿನ್ನ ಅಪ್ಪನನ್ನು ನಾನು ಕೊಂದವ" ಎಂದನವ.

"ಹುಚ್ಚುಚ್ಚಾಗಿ ಮಾತಾಡಬೇಡಿ ನಿದ್ದೆಯ ಅಮಲಿನಲ್ಲಿ" ಎಂದಳವಳು.

"ಇಲ್ಲ. ನನ್ಗೆ ನಿದ್ದೆ ಬಂದಿಲ್ಲ. ಮಲಗಿದ ಬಳಿಕ ನಾನು ಕಣ್ಣು ಮುಚ್ಚಿಲ್ಲ. ಆದ್ರೆ ನಿನ್ಗೆ ನಾನಿದನ್ನು ಹೇಳದಿದ್ರೆ ಮತ್ತೆ ನೀನು ನನ್ನ ಮೇಲೆ, ನಾನು ಜೈಲಿಗೆ ಹೋದಬಳಿಕವೋ, ನನಗೆ ಫಾಶಿಯಾದ ಬಳಿಕವೋ ನೀನು ಸಿಟ್ಟು ಮಾಡುವಿ. ಅದ್ಕಾಗಿ ನಿನ್ನೊಡ್ನೆ ಇದುದ್ದನ್ನೆಲ್ಲ.

ಮೊದ್ಲೇ ಹೇಳಿಬಿಡ್ತೇನೆ. ನನ್ಗೆ ನೀನೇನೂ ಸಹಾಯ್ ಮಾಡ್ಬೇಕಾದ್ದೂ ಇಲ್ಲ. ನೀನು ಮತ್ತೆ ಸಂಶಯ ಪಡ್ಬ್ಯಾರ್ದ್ರು. ನನ್ನನ್ನು ಕೊಂಡು ಹೋಗಲು ನಾಳೆಯೇ ಪೋಲೀಸಿನವರು ಬರ್ತಾರೋ ಅಲ್ಲ ನಾಳ್ದು ಬರ್ತಾರೋ ತಿಳಿಯದು. ಆದ್ರೆ ಅವ್ರು ಬರೋದು ಖಂಡಿತ."

ರುಕ್ಕು ಮಾತಾಡಲಿಲ್ಲ- ಅವಳು ಅವನ ಎದೆಯಮೇಲೆ ತನ್ನ ತಲೆಯನ್ನಿಟ್ಟಿದ್ದಳು.

"ನಾ ಮೊನ್ನೆ ಬಸ್ ಬಿಡ್ತಾ ಗ್ಯಾರೇಜಿಗೆ ಬರ್ತಿದ್ದೆ. ಆಗ ಮಳೆ ಬಂತು. ಒಂದು ಬೀಡಿ ಹಚ್ಚಿಸಿದೆ. ಅಷ್ಟರಲ್ಲಿ ಬಸ್ಸಿನ ಅಡಿಗೆ ಏನೋ ಬಿದ್ದ ಶಬ್ದವಾಯ್ತು. ನಾನೋಡ್ತೇನೆ, ನಿನ್ನ ಅಪ್ಪ ಬಿದ್ಬಿಟ್ಟಿದ್ದಾರೆ! ನಾ ಹೆದ್ರಿಕೆಯಲ್ಲಿ ಒಂದೇ ಸನ್ನೆ ಬಂದ್ಬಿಟ್ಟೆ. ನಾನೇನಾದ್ರೂ ಬೇಕೆಂದೇ ಹಾಗೆ ಮಾಡಿಲ್ಲ. ನಾ ಅವ್ರನ್ನು ಆತನ್ಕ ಆ ರಸ್ತೇಲಿ ನೋಡಿದ್ದೂ ಇಲ್ಲ. ಎಲ್ಲೋ ಅಡ್ಡ ರಸ್ತೆಯಿಂದ ಅವ್ರು ಫಕ್ಕನೆ ಬಂದಿರ್ಬಹುದು. ಆದ್ರೆ ನನೆ ಚಕ್ರದ ಸದ್ದಾಗುವಾಗ್ಲೇ ಗೊತ್ತು. ಆದ್ರೂ ನಾ ನಿನ್ನೊಡ್ನೆ ಇಲ್ಲಿ ಬಂದವ ಏನನ್ನೂ ಹೇಳಲಿಲ್ಲ. ಆದಿನ ಬರುವಾಗ ಓ ಅಲ್ಲಿ ಗದ್ದೆಗೆ ಬಿದ್ದು ನನ್ಗೆ ಮೇಲೆ ಬರ್ಲಿಕ್ಕೆ ಆಗ್ಲಿಲ್ಲ. ಮತ್ತೆ ಮತ್ತೆ ಮಧ್ಯರಾತ್ರಿಗೆ ಯಾರೋ ದಾರಿಯಲ್ಲಿ ಹೋಗುವವ್ರು ನನ್ನನ್ನು ಮೇಲಕ್ಕೆ ಎತ್ತಿದ್ರು."

"ಪೋಲೀಸರಿಗೆ ಇದು ಹೇಗೆ ಗೊತ್ತಾಯಿತು?"

"ಅದನ್ನು ನಾನು ಹೇಳಲಾರೆ. ಅವ್ರಿಗೆ ಗೊತ್ತಾಯಿತೋ ಇಲ್ವೋ ಎಂಬುದೂ ನನ್ಗೆ ತಿಳಿಯೋದಿಲ್ಲ. ಆದ್ರೆ ನಿನ್ನಪ್ಪ ಒಂದು ದಾಕ್ಲೆ ಮಾಡಿದ್ದಾರಲ್ಲ? ಆದ್ರ ಪ್ರಯೋಜ್ನ ನಿನ್ಗೆ ಅಂದ್ರೆ ನನ್ಗೆ ಹೆಚ್ಚು. ಆದ್ರಿಂದ ಏನಾದ್ರೂ ಇದನ್ನು ನಾನೇ ಮಾಡಿದ್ದೆಂದು ಪೋಲೀಸಿನೋರು ನಂಬದೆ ಇರ್ಲಿಕ್ಕಿಲ್ಲ. ಮತ್ತೆ ನಿನ್ನ ಅಣ್ಣಂದಿರೂ ಹಾಗೆಯೇ ಹೇಳಲಿಕ್ಕೂ ಸಾಕು."

"ಆದ್ರೆ ನೀವು ಮಾಡಿದ್ದು ಹೌದೇ?"

"ನನ್ಗೆ ಹೇಳೋಕೆ ಬರೋದಿಲ್ಲ. ನಾ ಅಂದೆನಲ್ಲ, ನಾ ಅವ್ರನ್ನು ರಸ್ತೇಲಿ ಕೊನೇ ತನ್ಕವೂ ನೋಡೇ ಇಲ್ಲ. ಹಾಗೆ ನಾ ನೋಡಿ ಅವ್ರನ್ನು ಬಸ್ಸನಡಿಗೆ ಹಾಕಿದ್ರೆ ನಾ ಹೇಳ್ತಿದ್ದೆ. ನನ್ಗೇನು ಹೆದ್ರಿಕೆ? ನಾಮಾಡಿದ

ತಪ್ಪಿಗೆ ನನ್ಗೆ ಶಿಕ್ಷೆ ಗೊರೆಯಲೇ ಬೇಕು. ಅವ್ರಿಗೆ ಗಾಯವಾದ್ದು ನನ್ನ ಬಸ್ಸಿನಿಂದಲೇ ಎಂದು ನನ್ಗೆ ತೋರ್‍ತದೆ. ಮುಂದಿನ ಒಂದು ಚಕ್ರ ಅವ್ರ ದೇಹದ ಮೇಲೆ ಹೋಗಿರ್‍ಬೇಕು. ಬಸ್ ಆಗ 'ಗಡಕ್' ಎಂದು ಅಲ್ಲಾಡಿತು. ಆದ್ರೆ ಅವ್ರಿಗೆ ಅದು ತಾಗುವಾಗ ನನ್ಗೆ ಹೀಗೆ ಗೊತ್ತಾಗ್ಲಿಲ್ವೋ ನಾ ಹೇಳಲಾರೆ."

"ನನಗೊಂದೂ ತಿಳಿಯುವುದಿಲ್ಲ" ಎಂದು ರುಕ್ಕು ಅಳತೊಡಗಿದಳು. "ಆಚೆ ಕಡೆಯಿಂದ ತಂದೆಯೂ ತೀರಿಕೊಂಡರು, ಈಚೆ ಕಡೆಯಿಂದ ನೀವೂ ನನ್ನ ಕೈ ಬಿಟ್ಟರೆ ನನಗೆ ಮತ್ತೆ ದೇವರೇಗತಿ."

"ಏನ್ಮಾಡೋದು? ಇದ್ರಿಂದ ಪಾರಾಗಬೇಕಾದ್ರೆ ಒಳ್ಳೇ ಹಣಾ ಬೇಕು.

"ಆದ್ರೆ ನಿಮ್ಮಿಂದ ಅದು ಆದುದಲ್ಲವೆಂದು ನನಗೆ ತೋರುತ್ತದೆ. ನೀವಾಗಿರುತ್ತಿದ್ದರೆ ಈ ಒಳಗೇ ಎಲ್ಲಾ ಸುದ್ದಿಯಾಗುತ್ತಿತ್ತು. ನಿಮ್ಮಿಂದ ಯಾರನ್ನೂ ಕೊಲ್ಲಲು ಸಾಧ್ಯವಿಲ್ಲವೆಂಬುದು ಖಂಡಿತ."

"ನಿನ್ಗೆ ಅಷ್ಟು ನನ್ಮೇಲೆ ಧೈರ್ಯ ಇದೆಯೆ?"

"ಖಂಡಿತ."

"ಒಂದ್ವೇಳೆ ನಾನೇ ಬೇಕೆಂದೇ ಕೊಂದೆ ಎಂದು ಸಿದ್ಧವಾದ್ರೆ?"

"ಅದು ಸುಳ್ಳೆಂದು ನಾನು ಹೇಳುತ್ತೇನೆ."

"ಹುಂ. ನನ್ಗೆ ಮೊನ್ನೆ ರಾತ್ರಿ ಉಡ್ಪಿಯಲ್ಲಿ ಇದ್ನೆಲ್ಲ ನೆನೆದು ಜೀವ ತೆಗೆದುಕೊಳ್ಳೋಣ ಎಂದನ್ನಿಸ್ತು. ಆದ್ರೆ ಅಲ್ಲಿಯೂ ಒಬ್ಬ ಹೆಂಗ್ಸು ನಿನ್ನ ಹಾಗೇ ಹೇಳಿದ್ದು. ಹಾಗೆ ನಾನು ಬದುಕಿ ಹಿಂದೆ ಬಂದೆ."

"ನೀವು ಇಂಥ ಹೇಡಿ ಎಂದು ನನಗೆ ಗೊತ್ತಿರಲಿಲ್ಲ."

"ಹೇಡಿ? ಯಾರು ನಾನೆ? ಇಲ್ಲ, ಇಲ್ಲ. ಈ ನಾಲ್ಕುದಿನ್ಗಳಲ್ಲಿ ಎಷ್ಟು ಮಂದಿ ಪೋಲೀಸಿನವ್ರನ್ನು ನೋಡಿದ್ವೆ. ಅವ್ರಿಗೆ ಹೆದರದೆ ಬಂದೆ ಗೊತ್ತುಂಟೆ ನಿನ್ಗೆ?"

"ಆಯ್ತು ಚಿಂತಿಲ್ಲ. ಎಲ್ಲ ನಾಳೆ ನೋಡೋಣ" ಎನ್ನುತ್ತ ರುಕ್ಕು ಅವನ ತುಟಿಗಳಿಗೆ ತನ್ನ ತುಟಿಗಳನ್ನು ಒತ್ತಿದಳು.

ಅವನ ಮನಸ್ಸು ಅವಳ ಮಾತನ್ನು ಕೇಳಿ ಸ್ವಲ್ಪ ಹಗುರವಾಯಿತು. ಅವಳ ಎದೆಗೆ ತನ್ನ ಎದೆಯನ್ನೊತ್ತಿ ಅವನು ನಸುನಕ್ಕ.

೧೪

ನಾರಾಯಣ ಮರು ದಿನ ಬೆಳಿಗ್ಗೆ ಎದ್ದವ ಮನಸ್ಸಿನಲ್ಲಿ ಏನನ್ನೋ ಯೋಚಿಸುತ್ತಿದ್ದ. ಉಡುಪಿಯ ಹೆಂಗಸಿಗಾದರೂ ಮಂತ್ರ ಶಕ್ತಿಯ ಮೂಲಕ ತಾನು ಅವಳನ್ನು ಕೇಳುತ್ತಿದ್ದರೆ ಬಹುಶಃ ಅವಳು ಎಲ್ಲವನ್ನೂ ಹೇಳಿಬಿಡಬಹುದಿತ್ತು. ಆದರೆ ರುಕ್ಕು ಏಕೆ ಹೀಗೆಂದು ಹೇಳಿದಳು ? ಅವಳಿಗೆ ತಾನು ಅವಳ ತಂದೆಯನ್ನು ಕೊಂದವನೆಂದು ತನ್ನ ಮೇಲೆ ಏಕೆ ಜಿಗುಪ್ಸೆಯಾಗಲಿಲ್ಲ ? ಅವಳು ತನ್ನಮೇಲೆ ಏಕೆ ಕೋಪಗೊಳ್ಳಲಿಲ್ಲ ? ತಾನು ಬಹುಶಃ ನಿರಪರಾಧಿಯಾಗಿರಲೂ ಬಹುದು. ಹಿಂದಿನ ದಿನ ತನಗೆ ಭಾವಂದಿರು ಮಾತಾಡುವಾಗ ಮೂರ್ಛೆಹೋದುದು ಕೇವಲ ಆಕಸ್ಮಿಕವಾಗಿರಬಹುದು. ಆದರೆ ಅವರು ತನ್ನ ಮೇಲೆ ಸಂಶಯಗೊಳ್ಳದೆ ಇದ್ದಾರೆ ? ಮುತ್ತನಿಗೆ ತನ್ನೊಡನೆ ಸಾಕಷ್ಟು ಹಣವಿಲ್ಲ, ಆಗಾಗ ಯಾರಿಂದಲಾದರೂ ಸಾಲ ಪಡೆಯುತ್ತಿದ್ದೇನೆ ಎಂಬ ಸಂಗತಿ ಗೊತ್ತಿರಲೂಬಹುದು. ಮುಂಡಪ್ಪ ಬಹುಶಃ ತನ್ನ ಮೇಲೆ ಫಕ್ಕನೆ ಅನುಮಾನ ಪಡಲಿಕ್ಕಿಲ್ಲ. ಆದರೆ ತಾನು ಮರಣ ಶಾಸನದ ಕುರಿತು ಅವರು ಮಾತಾಡುತ್ತಿದ್ದಂತೆಯೇ ಮೂರ್ಛೆ ಹೋದುದರಿಂದ ಅವನ ಜಿಜ್ಞಾಸೆಯೂ ಕೆರಳಿರಬಹುದು. ಅವನಿಗೂ ತನ್ನ ಮೇಲೆ ಸಂದೇಹವಾಗಿರಬಹುದು. ಅಲ್ಲದೆ, ಮುತ್ತನನ್ನು ಪೋಲೀಸರು ವಿಚಾರಿಸಿದಾಗ ಅವನು ಎಲ್ಲವನ್ನೂ ಅವರೊಡನೆ ಹೇಳಿರಬಹುದು. ಅವರು ಈಗ ತನ್ನನ್ನು ಹಿಡಿಯಲು ಸಮಯ ಸಾಧಿಸುತ್ತಿರಬೇಕು. ತಾನು ಇನ್ನೇನು ಮಾಡುತ್ತೇನೆಂದು ತನ್ನ ಚಲನ ವಲನಗಳನ್ನು ಪರೀಕ್ಷಿಸುತ್ತಿರಬಹುದು. ಆದರೆ ತಾನು ಇಂಥ ಕುತೂಹಲಮಯವಾದ ಸನ್ನಿವೇಶದಲ್ಲಿ ಎಷ್ಟು ದಿನ ಕಳೆಯಬಲ್ಲೆ ? ಆದದ್ದಾಗಲಿ. ಆ ಕಾಲಕ್ಕೆ ತನಗೆ ಯಾರಾದರೂ ಸಹಾಯಕ್ಕೆ ಒದಗಬಹುದು.

ಆದರೆ ಸಹಾಯ ? ಎನ್ನುತ್ತ ನಾರಾಯಣ ನಕ್ಕ. ತಾನು

ಎಷ್ಟೋ ಜನರಿಗೆ ಹಿಂದೆ ಉಪಕಾರಮಾಡಿರಬಹುದು. ಎಷ್ಟೋ ಜನರನ್ನು ಟಿಕೇಟಿಲ್ಲದೆಯೇ, ಅಗತ್ಯವಾದರೆ ಅವರ ಟಿಕೇಟಿನ ಹಣವನ್ನು ಕೊಟ್ಟೇ ಬಸ್ಸಿನಲ್ಲಿ ಕೊಂಡುಹೋಗಿರಬಹುದು. ಆದರೆ ಇವನ್ನೆಲ್ಲ ನೆನೆಯುವವರು ಯಾರಿದ್ದಾರೆ? ಅವರು ತಾನು ಮಾಡಿದ ಉಪಕಾರಗಳನ್ನು ಒಂದು ಕಾಫಿ ಕೊಟ್ಟೋ ನಾಲ್ಕಾಣೆ ಪ್ರತಿಫಲವನ್ನಿತ್ತೋ ಮರೆತಿರಬಹುದು.

ಮತ್ತೆ ಒಡೆಯರಿದ್ದಾರೆ. ಅವರಿಗೆ ಈ ಇಪ್ಪತ್ತು ವರ್ಷಗಳಲ್ಲಿ ತಾನೆಷ್ಟು ಸೇವೆಸಲ್ಲಿಸಿದ್ದೇನೆ! ತನ್ನಿಂದ ದುಡಿಸಿ ಅವರು ವರ್ಷ ಒಂದಕ್ಕೆ ಕಡಿಮೆಯೆಂದರೆ ಒಂದೆರಡು ಸಾವಿರ ರೂಪಾಯಿಗಳಷ್ಟನ್ನಾದರೂ ಲಾಭ ಪಡೆದಿರಬಹುದು. ಅವರಿಗಾಗಿ ಎಂಥೆಂಥ ಅಪಾಯುಗಳನ್ನು ಎದುರಿಸಿದ್ದೇನೆ! ಇವಕ್ಕೆಲ್ಲ ಅವರು ಕೊಡುವ ನೂರು ರೂಪಾಯಿಯ ಸಂಬಳ ಸಾಕೆ?

ಎಲ್ಲಕ್ಕಿಂತಲೂ ಮೊದಲು ಇವರೊಡನೆ ತನ್ನ ಅಪರಾಧದ ವಿಷಯ ಹೇಳಿಕೊಳ್ಳಲು ತನಗೆ ಮನಸ್ಸಿದೆಯೇ ? ಎಂದು ನಾರಾಯಣ ತನ್ನನ್ನೆ ಕೇಳಿಕೊಂಡ.

"ಛಿ! ನಾನು ಯಾವ ಮುಖದಲ್ಲಿ ಅವರೊಡ್ನೆ ನನ್ಗೆ ಬಂದೊದಗಿದ ಆಪತ್ತನ್ನು ಹೇಳಿಕೊಳ್ಳಬಲ್ಲೆ ? ಇದೇನಾದರೂ ಕ್ಯಾಲೆಯಲ್ಲ. ಇಲ್ವೇ ಹಣದ ವಿಚಾರವಲ್ಲ. ಕೆಲ್ಸದ ಸಂಬಂಧವಾದ ಸಂಗತಿಯೂ ಅಲ್ಲ. ಇದು ಕೊಲೆಯ ಅಪರಾಧ!"

ಹೀಗೆ ತನ್ನೊಳಗೆ ಹಲುಬುತ್ತ ಅವನು ಅಂಗಿ ಹಾಕಿಕೊಂಡ. ರುಕ್ಕು ಆಗ ಕಾಫಿತಂದುಕೊಟ್ಟಳು. ಪುಟ್ಟುವೂ ಅವನ ಬಳಿಗೆ ಬಂದಳು.

ಅವನು ಪುಟ್ಟುವನ್ನೆತ್ತಿಕೊಂಡು ಅವಳನ್ನು ಭಾವಗರ್ಭಿತವಾಗಿ ನೋಡಿದ. ಅವಳು ರುಕ್ಕುವಿನ ಪ್ರತೀಕವಾಗಿದ್ದಳು. ಅವಳದೇ ಮಂದಸ್ಮಿತ ಮುಖ. ಅವಳದೇ ಕೆಂಪು ತುಟಿಗಳು. ಅವಳದೇ ಗುಂಗುರು ಕೂದಲುಗಳು. ಅವಳದೇ ನೀಳವಾದ ಕಣ್ಣುಗಳು. ದೊಡ್ಡವಳಾಗುವಾಗ ಯಾರು ತಾಯಿ, ಯಾರು ಮಗಳೆಂದು ಹೇಳಲು ಸಾಧ್ಯವಾಗದು. ನಾರಾಯಣ ಎಂದಿನಂತೆ ಅವಳಿಗೆ ಎರಡು ಗುಟುಕು

ಕಾಫಿ ಕುಡಿಸಿ ಅವಳನ್ನು ಕೆಳಗಿಳಿಸಲು ಯತ್ನಿಸಿದ. ಆದರೆ ಅವಳು ಅವನ ಕೈಗಳನ್ನು ಗಟ್ಟಿಯಾಗಿ ಹಿಡಿದುಕೊಂಡಿದ್ದಳು. ಅವಳಿಂದ ತಪ್ಪಿಸಿ ಕೊಳ್ಳಲು ಅವನಿಗೆ ತುಂಬಾ ಕಷ್ಟವಾಯಿತು.

ಕಣ್ಣಿನಲ್ಲಿ ತುಂಬಿದ್ದ ನೀರನ್ನು ರುಕ್ಕುವಿಗೆ ಕಾಣದಂತೆ ಒರಸಿ ಕೊಂಡು ಹೊರಗೆ ಕಾಲಿಟ್ಟ.

"ನಿಮಗೆ ರಜೆಯಲ್ಲವೆ ? ಎಲ್ಲಿಗೆ ಹೋಗುತ್ತೀರಿ ?" ಎಂದು ರುಕ್ಕು ಕೇಳಿದಳು.

"ಈಗ ಬರುತ್ತೇನೆ. ಬೀಡಿ ಮುಗಿದಿದೆ" ಎಂದು ಅವನು ಅವಳನ್ನು ಹಿಂತಿರುಗಿ ನೋಡುತ್ತ ಅಂಗಳಕ್ಕಿಳಿದು ಹೋದ.

ಒಮ್ಮೆ ಅವನಿಗೆ ಉಡುಪಿಗೆ ಹೋಗೋಣವೆಂದು ತೋರಿತು. ಅಲ್ಲಿ ಲಕ್ಷ್ಮಿಯ ಮುಂದೆ ತಾನೇನು ಮಾಡಬೇಕೆಂದು ಕೇಳಬಹುದು, ಅವಳು ತನ್ನನ್ನು ಪೋಲೀಸರ ಕೈಗೆ ಸಿಕ್ಕದಂತೆ ಸುರಕ್ಷಿತವಾಗಿ ಕಾಪಾಡಬಹುದು. ಆದರೆ ಅವಳು ಈಗ ತನ್ನ ಮನಸ್ಸನ್ನು ಬದಲಾಯಿಸಿದ್ದರೆ, ಏನು ಮಾಡಬಹುದು ? ಅವಳ ಗಂಡನೂ ಈಗ ಇರಬಹುದು. ಅವನು ತನ್ನನ್ನು ಅಲ್ಲಿಂದ ಓಡಿಸಬಹುದು.

ಕೊನೆಗೆ ಅವನಿಗೆ ಆದದ್ದಾಗಲೀ ಎಂದು ತೋರಿತು.

ರಸ್ತೆಯ ಬದಿಯಲ್ಲಿದ್ದ ಒಂದು ಬೀಡಿಯ ಅಂಗಡಿಗೆ ಹೋಗಿ ಅಲ್ಲಿ ಕುಳಿತುಕೊಂಡ. ಅಲ್ಲಿ ಒಂದು ಪತ್ರಿಕೆಯಿತ್ತು. ಅದನ್ನು ತೆರೆದು ತನ್ನ ಸುದ್ದಿಯೇನಾದರೂ ಬಂದಿದೆಯೋ ಎಂದು ನೋಡಿದ. ಅಂದು ಒಂದು ಮೂಲೆಯಲ್ಲಿ ಈ ಸುದ್ದಿ ಅಚ್ಚಾಗಿತ್ತು.

> ಮಂಗಳೂರು, ಜೂನ್ ೨೩: ಮೊನ್ನೆ ಮೋಟರ್ ಅಪಘಾತದಲ್ಲಿ ಮೃತಪಟ್ಟ, ದೂಮನೆಂಬವನ ಮರಣದ ಕುರಿತಾಗಿ ಪೋಲೀಸರಿಗೆ ಹೊಸ ಸಂಗತಿಗಳು ಸಿಕ್ಕಿವೆಯೆಂದು ತಿಳಿದು ಬರುತ್ತದೆ.
>
> ದೂಮನು ಆಕಸ್ಮಿಕವಾಗಿ ಅಪಘಾತಕ್ಕೀಡಾದುದಲ್ಲ,

ಅವನ ಕೊಲೆಯ ಹಿಂದೆ ಒಬ್ಬ ಆಸಕ್ತ ವ್ಯಕ್ತಿಯ ಕೈವಾಡ ವಿತ್ತೆಂದು ಹೇಳಲಾಗಿದೆ.

ದೂಮನು ತನ್ನ ಮರಣದ ಮುಂಚಿನ ದಿನ ಒಂದು ಮರಣ ಶಾಸನವನ್ನು ಮಾಡಿಟ್ಟಿದ್ದನೆಂದೂ, ಅದಕ್ಕೂ ಅವನ ಮರ ಣಕ್ಕೂ ನಿಕಟ ಸಂಬಂಧವಿರಬಹುದೆಂದೂ ಊಹಿಸಲಾಗಿದೆ.

ಇನ್ನು ಒಂದೆರಡು ದಿನಗಳಲ್ಲಿ ಈ ಕೊಲೆಯ ವಿವರಗಳೆಲ್ಲ ಬಯಲಾಗಬಹುದೆಂದು ನಿರೀಕ್ಷಿಸಲಾಗಿದೆ.

ಪೋಲೀಸರ ತನಿಖೆ ಇನ್ನೂ ನಡಿಯುತ್ತಿದೆ.

ನಾರಾಯಣನಿಗೆ ಇದನ್ನೋದಿ ಮತ್ತೆ ಅಲ್ಲಿ ಕುಳಿತುಕೊಳ್ಳ ಲಾಗಲಿಲ್ಲ. ಅವನ ಮನಸ್ಸಿನ ಉದ್ವೇಗ ಹೆಚ್ಚಿತು. ಇನ್ನು ಪೋಲೀ ಸಿನವರು ತನ್ನನ್ನು ಯಾವ ಘಳಿಗೆಯಲ್ಲಿ ಕೈದು ಮಾಡಬಹುದು ಎಂದು ಅವನ ದೇಹವಿಡೀ ಕಂಪಿಸಿತು.

ಅವನು ಅಲ್ಲಿಂದೆದ್ದು ನೇರವಾಗಿ ಪೋಲೀಸ್ ಠಾಣೆಗೆ ನಡೆದ. ಇನ್ನೇನು, ನಡೆದುದನ್ನೆಲ್ಲಾ ಅವರಿಗೆ ಹೇಳಿಬಿಡುವುದು. ಆವರು ತನ್ನ ಹೇಳಿಕೆಯನ್ನು ನಂಬಲಿಕ್ಕಿಲ್ಲ. ತನ್ನ ಮೇಲೆ ಕೂಡಲೇ ಖಟ್ಲೆ ಹೂಡದೆ ಅವರು ಬಿಡಲಿಕ್ಕಿಲ್ಲ. ಆದರೆ ತಾನು ತಪ್ಪಿಸಿಕೊಂಡಾದರೂ ಏನು ಮಾಡಬಹುದು ? ಆಗ ಅವರಿಗೆ ತಾನೇ ಅಪರಾಧಿ ಎಂಬುದು ಸಿದ್ಧವಾಗಬಹುದು. ತಲೆ ತಪ್ಪಿಸಿಕೊಂಡು ಹೋಗಿ ತಾನು ಏನನ್ನು ಮಾಡಬಲ್ಲೆ ? ಹೇಗೆ ಜೀವಿಸಬಲ್ಲೆ ? ಕಂಡ ಕಂಡ ಪ್ರತಿಯೊಬ್ಬರನ್ನೂ ಸಂಶಯ ದೃಷ್ಟಿಯಿಂದ ನೋಡಿ ತಾನು ಎಷ್ಟು ದಿನ ಜೀವಿಸಬಲ್ಲೆ ? ಹಾಗೆ ಬದುಕಿಯಾದರೂ ಏನು ಪ್ರಯೋಜನ ? ತಾನು ಕಣ್ಣಾರೆ ಕಂಡು ದನ್ನು ಹೇಗೆ ಮರೆಯಬಹುದು ತಾನು ಮಾಡಿದ ಕೃತ್ಯಕ್ಕೆ ತಾನು ಉತ್ತರಿಸಲೇಬೇಕು. ಅದರ ಪ್ರತಿಫಲವನ್ನು ಪಡೆಯಲೇ ಬೇಕು. ಈ ಸ್ಥಿತಿಯಲ್ಲಿ ಮನಸ್ಸನ್ನು ಕದಡಿಸಿಕೊಂಡು ಇರಲು ತನ್ನಿಂದ ಇನ್ನು ಸಾಧ್ಯವಿಲ್ಲವೆಂದು ಅವನು ದಾರಿಯಲ್ಲಿ ಹೋಗುತ್ತಿದ್ದಾಗ ಯೋಚಿಸು ತ್ತಿದ್ದ.

ಪೋಲೀಸು ಠಾಣೆಯ ಕೆಂಪು ಗೋಡೆಗಳು ಅವನಿಗೆ ಕಾಣಿಸಿದವು.

ಅವನು ಬಸ್ಸಿನ ಕಂಡಕ್ಟರನಾಗಿದ್ದಾಗ ಪ್ರತಿದಿನವೂ ಮೂರು ನಾಲ್ಕು ಬಾರಿ ಅಲ್ಲಿಗೆ ಹೋಗುತ್ತಿದ್ದ. ಆಗ ಅವನಿಗೆ ಏನೂ ಭಯವಾಗುತ್ತಿದ್ದಿಲ್ಲ. ಆದರೆ ಇಂದು ಆ ಕೆಂಪು ಗೋಡೆಗಳನ್ನು ಕಂಡೊಡನೆ ಅವನ ಮನಸ್ಸನ್ನು ಭೀಕರವಾದ ಹೆದರಿಕೆ ಜಗ್ಗಿ ಹಿಡಿಯಿತು. ಎಂಥೆಂಥ ಕೊಲೆಪಾತಕಿಗಳನ್ನು ಹದ ಮಾಡಿದ ಕಚೇರಿ ಅದು. ಇನ್ನು ತನ್ನನ್ನೇನಾದರೂ ಅದು ಬಿಟ್ಟೀತೇ? ಎಂದು ಅವನು ಸೋಜಿಗಪಟ್ಟ.

ಅವನು ಅದರ ಬಾಗಿಲ ಬಳಿಗೆ ಹೋಗುವಾಗ ಅವನ ಬಸ್ಸಿನ ಕಂಡಕ್ಟರ ಮೋನಪ್ಪ ಠಾಣೆಯೊಳಗಿನಿಂದ ಹೊರಬಂದ. ನಾರಾಯಣನಿಗೆ ಅವನನ್ನು ಕಂಡು ಇನ್ನೂ ಭಯವಾಯಿತು.

"ಏನಣ್ಣಾ, ನಿಮ್ಮನ್ನು ಇಲ್ಲಿ ಬರ್ಲಿಕ್ಕೆ ಹೇಳಿದ್ದಾರೆಯೇ?" ಎಂದು ಅವನು ನಾರಾಯಣನೊಡನೆ ಕೇಳಿದ.

"ಇಲ್ಲ" ಎಂದು ನಾರಾಯಣ ತಲೆಯಲ್ಲಾಡಿಸಿದ.

"ನನ್ನನ್ನೂ ನಿನ್ನೆ ವಿಚಾರಿಸಿದರು," ಮೋನಪ್ಪನೆಂದ." ಆ ಮುದುಕ ಸತ್ತಂದು ನಾನೇಕೆ ಬಸ್ಸಿನಲ್ಲಿ ಇದ್ದಿಲ್ಲವೆಂದು ಕೇಳಿದ್ರು, ಆ ಮೇಲೆ ಮರುದಿನ ನನ್ಗೆ ಅದ್ರಲ್ಲಿ ರಕ್ತದ ಕಲೆಗಳು ನೋಡಸಿಕ್ಕಿದುವೇ ಎಂದೂ ಪ್ರಶ್ನಿಸಿದ್ರು.

"ಹೂಂ," ಎಂದ ನಾರಾಯಣ.

"ಇದು ನಿಮ್ಗೆ ಗೊತ್ತಿದೆಯೇ? ನಿಜ್ವಾಗಿಯೂ ಅವ್ರು ನಮ್ಮ ಬಸ್ಸಿನಡಿಗೆ ಬಿದ್ದು ಸತ್ತುದೆ?"

"ಹೌದು. ಅದ್ನೇ ಹೇಳೋಕೆ ನಾ ಬಂದಿದ್ದೇನೆ."

"ಹೇಳೋಕೆ!" ಮೋನಪ್ಪ ಚಕಿತನಾಗಿ ಕೇಳಿದ. ನಿಮ್ಗೆ ತಪ್ಪಿಸಿಕೊಳ್ಬಹುದಲ್ಲಾ? ಬೇಕಾದ್ರೆ ನನ್ನ ಹಳ್ಳಿಯ ಮನೆಗೆ ಬನ್ನಿ. ಅಲ್ಲಿ ಯಾರಿಗೂ ತಿಳಿಯದಂತೆ ನಾ ಮಾಡ್ತೇನೆ. ಮತ್ತೆ ಏನಾಗ್ತದೆಂದು ನೋಡ್ಬಹುದಲ್ಲ!"

"ನಾ ತಪ್ಪಿಸಿಕೊಳ್ಳೋದಿಲ್ಲ ಮೋನಪ್ಪ," ನಾರಾಯಣ ನಿರಾಶೆಯಲ್ಲಿ ಹೇಳಿದ. "ನನ್ಗೆ ತಪ್ಪಿಸ್ಲಿಕ್ಕೆ ಮನಸ್ಸಿಲ್ಲ. ಆದದ್ದಾಗಲಿ ಎಂದು ನಾನು ಹೋಗ್ತಿದ್ದೇನೆ."

"ಛೆ! ಇದೆಂಥ ಮಾತು?" ಮೋನಪ್ಪ ಅವನ ಹೆಗಲಿಗೆ ಕೈಹಾಕಿ ಅವನನ್ನು ಹಿಂದಕ್ಕೆ ಎಳೆದ. "ಯಾವುದಕ್ಕೂ ಅವ್ರು ಪತ್ತೆ ಮಾಡ್ಲಿ. ಆ ಒಳ್ಗೆ ಏನಾದ್ರೊಂದು ಆಗ್ತದೆ. ನೀವು ಹಿಂದೆ ಬನ್ನಿ."

"ಬೇಡ ಮೋನಪ್ಪ. ನಿನ್ಗೆ ನನ್ಮೇಲೆ ಎಷ್ಟು ಪ್ರೀತಿಯಿದೆಯೆಂದು ನನ್ಗೆ ಗೊತ್ತಿದೆ. ಆದ್ರೆ ನಾ ಇನ್ನು ಪೋಲೀಸ್ರನ್ನು ತಪ್ಪಿಸ್ಲಿಕ್ಕೆ ಇಚ್ಛೆ ಸೋದಿಲ್ಲ. ನನ್ಗೆ ಘಾತೀಯಾದ್ರೂ ಚಿಂತಿಲ್ಲ. ದುಡ್ಡಿಗಾಗಿ ಮಾವ ನನ್ನು ಕೊಂದು ಈಗ ಮೆರೆಯುತ್ತಿದ್ದಾನೆ ಎಂದು ಜನ್ರು ಹೇಳೋದು ಬೇಡ. ನಾನೇ ಕೊಂದವನೆಂದು ನನ್ಗೆ ಈಗ ನಂಬಿಕೆಯೂ ಆಗಿದೆ."

"ಅಂದ್ರೆ ನೀವು ನಿಜ್ವಾಗಿಯೂ ಕೊಲ್ಲಲಿಲ್ವೆ?"

"ಅದನ್ನು ಈಗ ನಾನು ಹೇಳಿ ಏನು ಪ್ರಯೋಜ್ನ? ನಾನೇ ಕೊಂದವನೆಂದು ಪೇಪರಿನಲ್ಲಿ ಕೂಡ ಬರ್ದಿದ್ದಾರೆ! ಇನ್ನೇನು ನನೆ ಹೆದ್ರಿಕೆ?" ಹೀಗೆನ್ನುತ್ತ ಮೋನಪ್ಪನ ಹಿಡಿತದಿಂದ ಅವನು ಬಿಡಿಸಿ ಕೊಂಡು ಪೋಲೀಸು ಠಾಣೆಯೊಳಗೆ ಹೊಕ್ಕ.

ಅಲ್ಲಿ ಮುಂಡಪ್ಪನೂ ಮುತ್ತನೂ ಕುಳಿತುಕೊಂಡಿದ್ದುದನ್ನು ಕಂಡು ನಾರಾಯಣನಿಗೆ ಇನ್ನೂ ಆಶ್ಚರ್ಯವಾಯಿತು. ಅವರಿಬ್ಬರೂ ಅವನನ್ನು ನೋಡಿದರು ವಿನಃ ಮಾತಾಡಲಿಲ್ಲ. ಅಲ್ಲಿದ್ದ ಪಹರೆಯ ಪೋಲೀಸಿನವನಿಗೆ ನಮಸ್ಕಾರಮಾಡಿ ನಾರಾಯಣ ಅಲ್ಲೇ ನಿಂತು ಕೊಂಡ.

ಪೋಲೀಸಿನವರು ಒಳಗೆ ಯಾರನ್ನೋ ವಿಚಾರಿಸುತ್ತಿದ್ದುದು ಕೇಳುತ್ತಿತ್ತು. ನಾರಾಯಣನಿಗೆ ಅಲ್ಲಿ ಯಾರೊಡನೆ ಮೊದಲು ತನ್ನ ಅಪರಾಧವನ್ನು ಹೇಳಿಕೊಳ್ಳಬೇಕೆಂಬುದು ಅರ್ಥವಾಗಲಿಲ್ಲ. ಅಲ್ಲಿ ಮೇಜಿನ ಮೇಲೆ ಕಾಗದದ ಕಟ್ಟುಗಳಿದ್ದುವು. ಅಧಿಕಾರಿಗಳ ಒಂದು ಹ್ಯಾಟೂ ಇತ್ತು.

ನಾರಾಯಣ ಮೊದಲು ಒಳಗೆ ಮಾತಾಡುತ್ತಿರುವುದಕ್ಕೆ ಕಿವಿ ಗೊಡಲಿಲ್ಲ. ಆದರೆ ಅಲ್ಲಿ ಗದರಿಸುವ ಶಬ್ದ ಕೇಳಿ ಅವನ ಮನಸ್ಸಿನಲ್ಲಿ ಏಳುತ್ತಿದ್ದ ಭಾವನೆಗಳೆಲ್ಲ ಒಮ್ಮೆಲೇ ಪರಾರಿಯಾದುವು. ಏನೊ

ತನ್ನಂತಹ ಒಬ್ಬ ಅಪರಾಧಿಯನ್ನು ಅವರು ವಿಚಾರಿಸುತ್ತಿರಬೇಕೆಂದು ಅವನು ಗ್ರಹಿಸಿದ.

"ಇಗೋ ಸುಳ್ಳು ಹೇಳ್ಬೇಡ," ಒಳಗೆ ಅಧಿಕಾರಿಗಳು ಗದರಿಸುತ್ತಿದ್ದರು. "ನಮ್ಗೆ ಎಲ್ಲ ತಿಳ್ದಿದೆ. ಈಗ ಕಾರು ಬರ್ತದೆ ನೋಡು"

"ಇಲ್ಲ. ನಾನು ಆದಿನ ಕಾರನ್ನು ಹೊರಗೆ ಕೊಂಡುಹೋಗಲೇ ಇಲ್ಲ" ಎಂದು ಆ ವ್ಯಕ್ತಿ ವಾದಿಸುತ್ತಿತ್ತು.

"ನಿನ್ನ ಮುಖದಲ್ಲೇ ಸುಳ್ಳು ಹೇಳುತ್ತೀಯೆಂದು ಗೊತ್ತಾಗ್ತದೆ. ನಿನ್ನನ್ನು ಹೀಗೆಯೇ ಬಿಟ್ಬಿಡ್ತೇವೆಂದು ನೀನು ಯೋಚಿಸ್ಬೇಡ."

"ನೀವು ಮತ್ತೂ ಮತ್ತೂ ಅದನ್ನೇ ಕೇಳುತ್ತೀರಲ್ಲ? ನಾನು ಆದಿನ ಕಾರನ್ನೇ ಹೊರಗೆ ತೆಗೆದಿಲ್ಲ. ಆದಿನ ನಾನು ಊರಲ್ಲೇ ಇರಲಿಲ್ಲ. ಹೀಗೆ ಸುಮ್ಮನೆ ನನ್ನೊಡನೆ ಪ್ರಶ್ನಿಸಿ ನನ್ನನ್ನು ಪೀಡಿಸಬೇಡಿ. ಅವನೇ ಕೊಂದಿರಬೇಕು. ಅವನಿಗೇ ಆದರಿಂದ ಹಣ, ಮನೆ ಎಲ್ಲ ಸಿಗುತ್ತದೆ"

ನಾನು ಈಗ ಎರಡು ವರ್ಷಗಳಿಂದ ಡ್ರೈವ್ ಮಾಡ್ತಿದ್ದೇನೆ. ಈತನಕ ಏನಾದರೂ ನನ್ನಮೇಲೆ ಕೇಸ್ ಆಗಿದೆಯೆ? ನನ್ನಮೇಲೆ ಏನಾದರೂ ಕೇಸ್ ಮಾಡಿದರೆ ನಿಮ್ಮ ಕೆಲಸ ಹೋಗುವಂತೆ ಮಾಡುತ್ತೇನೆ ನೋಡಿ!"

"ಒಹ್! ಅದ್ನೆಲ್ಲಾ ನಾವು ಹೆದ್ರುವವ್ರಲ್ಲ! ನಿನ್ನೊಡ್ನೆ ತುಂಬಾ ಹಣವಿರ್ಬಹುದು. ನೀನು ಯಾರಿಗಾದ್ರೂ ಲಂಚ ತಿನ್ನಿಸಿ ಏನಾದ್ರೂ ಮಾಡ್ಬಹುದೆಂದು ನೆನೆಸಿದ್ದಿಯಾ? ನೋಡೋಣ ನಿನ್ನ ಕಾರು ಈಗ್ಲೇ ಬರ್ತದೆ. ಅದ್ರ ಚಕ್ರವನ್ನು ಅಳೆದರಾಯ್ತಲ್ಲ? ಬಸ್ಸಿನ ಚಕ್ರಯಾವುದು ಕಾರಿನ ಚಕ್ರಯಾವುದು ಎಂದು ನಮ್ಗೆ ತಿಳಿಯೋವಿಲ್ವೆ?"

ನಾರಾಯಣನಿಗೆ ಬೇಡ ಬೇಡವೆಂದರೂ ಈ ವಾದ ಪ್ರತಿವಾದಗಳು ಒಳಗಿನಿಂದ ಕೇಳುತ್ತಿದ್ದುವು. ಇದು ತನ್ನ ಅಪರಾಧದ ಕುರಿತೇ ವಿಚಾರಣೆಯಾಗಿರಲೂ ಬಹುದೆಂದು ತೋರಿತವನಿಗೆ. ಆದರೆ ಈ ಮಧ್ಯೆ ಕಾರಿನ ಪ್ರಸ್ತಾಪ ಏಕೆ ಬಂತೆಂದು ಅವನು ಆಶ್ಚರ್ಯಪಟ್ಟ.

ಒಳ್ಳೇ ಮಾತಿನಲ್ಲಿ ನಿಜ ಹೇಳು. ನೀನು ಅಲ್ಲಿಂದ ಹೋಗುವಾಗ ನೋಡಿದವರಿದ್ದಾರೆ!"

" ಯಾರು ನೋಡಿದ್ದಾರೆ ನೋಡೋಣ."

"ಯಾರೆಂದು ನಿನ್ಗೆ ಹೇಳ್ಬೇಕೆ ?"

" ಹೇಳ್ಬೇಡಿ. ನಿಮ್ಮಸುಳ್ಳು ಎಲ್ಲಿ ವರೆಗೆ ಇದೆಯೆಂದು ತಿಳಿದಂತಾಯಿತು."

" ನಿನ್ಗೆ ಅಲ್ಲಿ ಬೇಕಾದವ್ರು ಯಾರೂ ಇಲ್ವೆ ?"

" ಇಲ್ಲ "

" ಖಂಡಿತವಾಗಿಯೂ ಇಲ್ಲವೆ ?"

" ಹಾಗೆ ನನ್ನ ಗುರುತು ಇಡೀ ಊರಿನವರಿಗೇ ಇರಬಹುದು,"

" ಅಲ್ಲಿ, ನಿನ್ನೊಬ್ಬು ಡಾರ್ಲಿಂಗ್ ಅಲ್ಲಿ ಇದ್ದಾಳಲ್ಲ ?"

" ಸುಮ್ಮನೆ ಏನೇನೋ ಮಾತಾಡ್ಬೇಡಿ."

" ಅಪ್ಪು ನೀನು ಕೋಪಗೊಳ್ಳಬೇಡ. ನಾವು ಹೇಳುವುದನ್ನು ಸ್ವಲ್ಪ ಕೇಳು."

" ನನಗೆ ಅಗತ್ಯವಿಲ್ಲ. ನೀವು ಬೇಕಾದುದನ್ನು ಮಾಡಿ. ಏನಾಗುತ್ತದೆಂದು ನೋಡೋಣ."

" ನೋಡುವುದೇನು ? ಅಲ್ಲಿ ಒಬ್ಬಳು ಸರಸ್ವತಿ ಎಂಬುವಳಿದ್ದಾಳಲ್ಲ ? ನಿನ್ಗೆ ಅವಳ ಪರಿಚಯವಿಲ್ವೆ ?"

"....................."

" ಏನೋ ಈಗ ಮಾತಾಡೋದಿಲ್ಲ. ಒಮ್ಮೆಲೇ ನಿನ್ನ ನಾಲಿಗೆ ಬಿದ್ದುಹೋಯ್ತು ?"

" ನೀವು ಸು........ಮ್ಮ........"

ಹೀಗೆನ್ನುವಾಗ ಹೊರಗಿನಿಂದ ಒಂದು ಕಾರಿನ ಹಾರ್ನು ಕೇಳಿಸಿತು.

" ಏಕೋ ಅಳುತ್ತಿ ಮಂಗ ? ಆ ಕಾರನ್ನು ಎಲ್ಲಿ ಅಡಗ್ಸಿಟ್ಟಿದ್ದೀ ? ಈಗ ನಿನ್ನ ನಾಲಿಗೆಯೇಕೆ ನಲಿಯೋದಿಲ್ಲ ?"

" ನಿಮ್ಗೆ ಏನಾದ್ರೂ ಕೊಡ್ತೇನೆ........ನನ್ನನ್ನು ಬಿಟ್ಟು ಬಿಡಿ.... ನನ್ಗೆ ತಿಳಿಯದೆ ಇಷ್ಟು ಮಾತಾಡಿದೆ."

" ಹೊರಗೆ ಬಾ. ಕಾರನ್ನು ನೋಡೋಣ " ಎಂದು ಅಧಿಕಾರಿಗಳು ಎಳೆದುಕೊಂಡು ಬಂದರು.

ನಾರಾಯಣನಿಗೆ ಅವನನ್ನು ಕಂಡು ವಿಸ್ಮಯವಾಯಿತು. ಅವನೂ ಮೆಲ್ಲನೆ ಅವರ ಹಿಂದೆಯೇ ಕಾರಿನ ಬಳಿಗೆ ಹೋದ. ಅದ ರಿಂದ ಇಬ್ಬರು ಪೋಲೀಸಿನವರು ಕೋವಿಗಳನ್ನು ಹಿಡಿದುಕೊಂಡು ಕೆಳ ಗಿಳಿದು ಅಧಿಕಾರಿಗಳಿಗೆ, ಸಲಾಂ ಹೊಡೆದರು.

"ಬಹಳ ಜಾಗ್ರತೆಯಿಂದ ಇದನ್ನು ಇಟ್ಟಿದ್ರು ಸಾರ್. ಇದ್ರ ಸುತ್ತು ಮುಳ್ಳಿನ ಬೇಲಿಯಿತ್ತು. ಮೇಲೆಲ್ಲ ಹುಲ್ಲನ್ನು ಹಾಕಿದ್ರು."

"ನಿನ್ನ ತಲೆ ಒಳ್ಳೇತಲೆ. ಕಾರನ್ನಡಗಿಸೋದಾದ್ರೂ ಅದನ್ನು ತೊಳೀಬೇಡ್ವಿತ್ತೆ? ಇಗೋ ಈ ರಕ್ತದ ಕಲೆಗಳಿಗೆ ನೀನು ಏನನ್ನುತ್ತೀ?" ಎಂದು ಅಧಿಕಾರಿ ತನ್ನ ಬೆತ್ತವನ್ನು ಆ ಕಲೆಗಳ ಮೇಲೆ ಕುಣಿಸುತ್ತ ಕೇಳಿದರು.

"ನನ್ಗೆ ಒಮ್ಮೆಲೇ ಹೆದ್ರಿಕೆಯಾಯ್ತು. ನನ್ನನ್ನು ಬಿಡೊ ದಿಲ್ವೆ?...." ಎಂದು ಅವನು ಜೋರಾಗಿ ಅತ್ತ.

"ನೀನೇನು ಚಿಕ್ಕ ಮಗುವೆ?" ಎಂದು ಅಧಿಕಾರಿ ಅವನನ್ನು ಒಳಗೆ ಕರೆದು ತರುವಾಗ ನಗುತ್ತ ಕೇಳಿದರು.

"ಮುಂಡಪ್ಪ ಮತ್ತು ಮುತ್ತ ಅವರು ಬಂದೊಡನೆ ಎದ್ದು ನಿಂತರು. ನಾರಾಯಣನನ್ನು ಉಡುಪಿಯಲ್ಲಿ ಸಂಧಿಸಿದ ಪೋಲೀಸಿನ ವನು ಒಳಗೆ ಬಂದ. ನಾರಾಯಣನಿಗೆ ಅವನನ್ನು ಕಂಡೊಡನೆ ಮೂರ್ಛೆ ಹೋಗುವಂತಾಯಿತು.

ಅವನು ಆ ಕಾರಿನ ಡ್ರೈವರನ ಕೈಗಳಿಗೆ ಬೇಡಿ ಹಾಕಿದ. ನಾರಾಯಣನಿಗೂ ಅವನ ಪರಿಚಯವಿತ್ತು. ಅವನು ಕಾರಿನ ಡ್ರೈವರ ಮಾತ್ರವಲ್ಲ, ಅಂಥ ಹತ್ತು ಕಾರುಗಳ ಒಡೆಯ! ಇಂಥವನಿಗೇ ಹೀಗಾಗು ವಾಗ ತಾನೇಕೆ ಇನ್ನು ಹೆದರಬೇಕು? ಎಂದು ನಾರಾಯಣ ನೆನೆದ.

ಪೋಲೀಸು ಅಧಿಕಾರಿಗಳು ಫಕ್ಕನೆ ನಾರಾಯಣನನ್ನು ನೋಡಿ ದರು. ಅವರಿಗೆ ಅವನ ಗುರುತು ಸಿಕ್ಕಿತು.

"ಏನೋ ನಾರಾಯ್ಣ, ಹೇಗಿದ್ದೀ? ಇಲ್ಲಿ ಏನು ನನ್ನೊಡ್ನೆ ಏನಾದ್ರೂ ಕೆಲ್ಸವಿತ್ತೆ? ಎಂದು ಅವರು ಅವನನ್ನು ಪ್ರಶ್ನಿ ಸಿದರು.

"ಆಗ ಮುಂಡಪ್ಪನೆದ್ದು "ಇವನೇ ನನ್ನ ಸಿಸ್ಟರ್ಸ್ ಹಸ್ಬೆಂಡ್" ಎಂದ.

"ಹ್ಹೊ!" ಎಂದು ಅಧಿಕಾರಿಗಳು ಗೊಳ್ಳೆಂದು ನಕ್ಕರು. "ಈ ಮಹರಾಯನೇ! ನೀವು ಮೊದ್ಲೇ ನನ್ಹೊಡ್ನೆ ಏಕೆ ಹೇಳಲಿಲ್ಲ? ಇವ ನನ್ನ ಹಳೇ ದೋಸ್ತಿ! ಏನೋ ನಾರಾಯಣ, ನಿನ್ಗೆ ಸ್ವಲ್ಪ ಹೆದ್ರಿಕೆ ಹಿಡಿದಿತ್ತಲ್ವೇ? ನಿನ್ನೆಯಾದ್ರೆ ನಿನ್ನನ್ನು ಕೋಣೆಯಲ್ಲಿ ಕೂಡಿಸ್ಬಿಡ್ತಿದ್ವೆ. ಆದ್ರೆ ಈಗ ನಿನ್ಗಿಂತ ಸ್ವಲ್ಪ ಮುಂಚೆ ನಮ್ಗೆ ಬೇಕಾದವ ಸಿಕ್ಕಿಬಿಟ್ಟ. ಆ ದಿನ ನಿನ್ನ ಮಾವನ ಮೇಲೆ ನಿನ್ಗಿಂತ ಒಂದು ನಿಮಿಷದ ಮುಂಚೆ ಅವನು ಕಾರು ಬಿಟ್ಟಿದ್ದ. ಈಗ್ಲೂ ನಿನ್ಗಿಂತ ಒಂದು ಮಿನಿಟ್ಟಿನ ಮುಂಚೆ ನಮ್ಗೆ ಅವ ಸಿಕ್ಕಿ ಬಿಟ್ಟ! ಮೋಟಾರು ಚಕ್ರಗಳಿಗೆ ಕಣ್ಣಿರ್ತಿದ್ರೆ ನಮ್ಗೆ ಮೊದ್ಲೇ ತಿಳೀತಿತ್ತು"

ನಾರಾಯಣನಿಗೆ ಅಧಿಕಾರಿಗಳ ಮಾತನ್ನು ನಂಬಲಿಕ್ಕಾಗಲಿಲ್ಲ. "ಏನೂ ಇರ್ಲಿ ನಾರಾಯ್ಣ, ನೀನು ಒಳ್ಳೇ ಇಬ್ರು ಭಾವಂದಿರನ್ನು ಪಡೆದಿದ್ದೀ. ಅವ್ರ ಕೆಲ್ಸದಿಂದ ನೀನು ಬದುಕಿದೆ. ಇಲ್ವಾದ್ರೆ ಈ ಪಾಷಾಂಡಿ ನಮ್ಗೆ ಇಷ್ಟು ಸುಲ್ಭದಲ್ಲಿ ಸಿಗ್ತಿದ್ದಿಲ್ಲ. ಅವ್ನ ಕುರಡು ಚಕ್ರಗಳು ಮಣ್ಣುಪಾಲಾಗ್ತಿದ್ದವು."

ನಾರಾಯಣ ಆಗ ತನ್ನ ಭಾವಂದಿರನ್ನು ನೋಡಿದ. ಅವರೂ ಆಗ ಅಧಿಕಾರಿಗಳೊಡನೆ ನಗುತ್ತಿದ್ದರು.

---

